# ಹೈದರಬಾದ್ ವಿಮೋಚನ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್.ಪ್ರಬಂಧ

ಸಂಶೋಧಕ
ಶ್ರೀ ಸುಭಾಷಚಂದ್ರ ಮೂಡ್ಲಮನಿ

ಮಾರ್ಗದರ್ಶಕರು
ಡಾ. ಎಸ್. ಚನ್ನಸ್ವಾಮಿ ಸೋಸಲೆ





ಚರಿತ್ರೆ ವಿಭಾಗ
ಸಮಾಜವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೨

79

# ಹೈದರಬಾದ್ ವಿಮೋಚನ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್.ಪ್ರಬಂಧ

ಸಂಶೋಧಕ
ಶ್ರೀ ಸುಭಾಸಚಂದ್ರ ದೊಡ್ಡಮನಿ

ಮಾರ್ಗದರ್ಶಕರು
ಡಾ.ಎನ್.ಚಿನ್ನಸ್ವಾಮಿ ಸೋಸಲೆ





ಚರಿತ್ರೆ ವಿಭಾಗ
ಸಮಾಜವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೨

# ಮಾರ್ಗದರ್ಶಕರ ಪ್ರಮಾಣ ಪತ್ರ

"*ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಗಡಿಶಿಬಿರಗಳ ಪಾತ್ರ*" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಶ್ರೀ ಸುಭಾಸಚಂದ್ರ ದೊಡ್ಡಮನಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧವನ್ನು ಹಾಗೂ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಳಿಗಾಗಲಿ ಬಳಸಿಲ್ಲವೆಂಬುದನ್ನು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 12.04.09

ಸ್ಥಳ: ವಿದ್ಯಾರಣ್ಯ

ಎನ್. ಚಿನ್ನಸ್ವಾಮಿ ಸೋಸಲೆ 12/4/09

**ಡಾ. ಎನ್. ಚಿನ್ನಸ್ವಾಮಿ ಸೋಸಲೆ**
ಅಧ್ಯಾಪಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ಎನ್. ಚಿನ್ನಸ್ವಾಮಿ ಸೋಸಲೆ
ಅಧ್ಯಾಪಕ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ 583 276

# ಪ್ರಮಾಣ ಪತ್ರ

*ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಗಡಿಶಿಬಿರಗಳ ಪಾತ್ರ* ಎಂಬ ಪ್ರಬಂಧವನ್ನು ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ :** 02.08.02

**ಸ್ಥಳ :** ವಿದ್ಯಾರಣ್ಯ

**ಶ್ರೀ ಸುಭಾಸಚಂದ್ರ ದೊಡ್ಡಮನಿ**
ಸಂಶೋಧಕ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

***ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಗಡಿಶಿಬಿರಗಳ ಪಾತ್ರ*** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಒಪ್ಪಿಸಲು ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ ಅವರಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುವೆ.

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಸಹಕಾರ ನೀಡಿದ ಮಾನ್ಯ ಕುಲಸಚಿವರಾದ ಡಾ.ಕೆ.ವಿ.ನಾರಾಯಣ,ಅಧ್ಯಯನಾಂಗದ ನಿರ್ದೇಶಕರಾದ ಡಾ.ಹಿ.ಚಿ.ಬೋರಲಿಂಗಯ್ಯ ಹಾಗೂ ಚರಿತ್ರೆ ವಿಭಾಗದ ಅಂದಿನ ಮುಖ್ಯಸ್ಥರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಹಾಗೂ ಈಗಿನ ಮುಖ್ಯಸ್ಥರಾದ ಡಾ.ಟಿ.ಪಿ.ವಿಜಯ್ ಅವರುಗಳಿಗೆ ಅನಂತ ಧನ್ಯವಾದಗಳನ್ನು ಸಲ್ಲಿಸುವುದು ನನ್ನ ಆದ್ಯ ಕರ್ತವ್ಯವೆಂದು ಭಾವಿಸುತ್ತೇನೆ.

ನನಗೆ ಪ್ರಬಂಧದ ವಿಷಯ ಸೂಚಿಸಿ ಅಧ್ಯಯನದುದ್ದಕ್ಕೂ ತಾಳ್ಮೆಯ ಮಾರ್ಗದರ್ಶನ ನೀಡಿದ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು. ಮತ್ತು ನನ್ನ ಅಧ್ಯಯನದ ಸಂದರ್ಭದಲ್ಲಿ ಸಲಹೆ ಸೂಚನೆಗಳನ್ನು ನೀಡಿದ ಡಾ.ಸಿ.ಆರ್.ಗೋವಿಂದರಾಜು, ಡಾ.ವಿರುಪಾಕ್ಷಿ ಪೂಜಾರಹಳ್ಳಿ, ಶ್ರೀ ಮೋಹನ್‌ಕೃಷ್ಣ ರೈ ಅವರುಗಳಿಗೆ ಅನಂತ ಕೃತಜ್ಞತೆ ಸಲ್ಲಿಸುವೆ.

ಅಧ್ಯಯನದ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳಿಗೆ ಪರಿಹಾರ ಸೂಚಿಸಿ ಪ್ರಬಂಧ ಸಿದ್ಧಗೊಳಿಸುವಲ್ಲಿ ಮುಕ್ತಮನದ ಸಲಹೆಗಳನ್ನು ನೀಡಿದ ಶ್ರೀ ಹರಿಶ್ಚಂದ್ರ ದಿಗ್ಗಸಂಗಿಕರ್, ಡಾ.ಎಚ್.ಕೆ.ನಾಗೇಶ, ಡಾ.ಕೆ.ಎಂ.ಮೈತ್ರಿ ಅವರಿಗೆ, ಡಾ.ಚಂದ್ರಕಾಂತ ಯತನೂರ, ಎಸ್.ಆರ್.ಮಣ್ಣೂರು ಹಾಗೂ ಕ್ಷೇತ್ರಕಾರ್ಯದಲ್ಲಿ ಅಧ್ಯಯನಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಒದಗಿಸಿಕೊಟ್ಟ ವಿಮೋಚನಾ ಹೋರಾಟಗಾರರಿಗೂ ನನ್ನ ನಮನಗಳು.

ಮಗನ ಓದಿನ ಹೆಗ್ಗಳಿಕೆಯನ್ನು ಸಾರುತ್ತ, ಅನೇಕ ಕನಸುಗಳನ್ನು ಕಟ್ಟಿಕೊಂಡು ನನ್ನ ಓದನ್ನೆ ಬಯಸುವ ನನ್ನ ಪೂಜ್ಯ ತಂದೆ-ತಾಯಿಯರಿಗೆ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ನನ್ನ ಓದಿನ ಬಗ್ಗೆ ಹರ್ಷವ್ಯಕ್ತಪಡಿಸುವ ಸೋದರ, ಸೋದರಿಯರಿಗೆ ಹಾಗೂ ಮಾವಂದಿರುಗಳಿಗೆ ವಂದನೆಗಳು.

ಪುಸ್ತಕ ಸೌಲಭ್ಯವನ್ನು ಒದಗಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಾಧಿಕಾರಿಗಳಾದ ಶ್ರೀ ಜೆ.ಆರ್.ರಾಮಮೂರ್ತಿ, ಶ್ರೀಮತಿ ಎಚ್.ನಾಗವೇಣಿ, ಶ್ರೀ ಯು.ಮಲ್ಲಿಕಾರ್ಜುನ ಮತ್ತು ಇತರ ಸಿಬ್ಬಂದಿ ವರ್ಗದವರ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಸ್ನೇಹಿತರಾಗಿ, ಹಿತೈಷಿಗಳಾಗಿ ಯಾವತ್ತೂ ನನ್ನ ಏಳ್ಗೆಯನ್ನು ಬಯಸುತ್ತಿರುವ ಎ.ಚನ್ನಪ್ಪ, ಗವಿಸಿದ್ದ ಪಾಟೀಲ, ಕೆ.ವೆಂಕಟೇಶ, ವಿಜಯಕುಮಾರ, ಅಶೋಕ ಪಟ್ಟಣಶೆಟ್ಟಿ, ಸತೀಶ್ ಜೀವರ್ಗಿ, ಪ್ರಶಾಂತ ಹೊಸಕೋಟೆ, ಡಾ.ಸುರೇಶ, ಅಶೋಕ ಬಿರದಾರ, ಶಿವಾನಂದ, ಸಿ.ಮಂಜುನಾಥ, ಜೈ ಭೀಮದರ್ಗಿ, ದತ್ತಾತ್ರೆಯ ಇಕ್ಕಳಕಿ, ಯರಿಸ್ವಾಮಿ ಎಂ., ಡಾ.ರೇವಯ್ಯ ಒಡೆಯರ, ಕೆ.ಮಹೇಶ, ಬಸವರಾಜ ಹಡಪದ, ಕೆ.ಸತೀಶ, ಕರಿಸಿದ್ದನಗೌಡ ಪಾಟೀಲ, ವಿ.ಸಿ.ಮಾರುತಿ, ಆರ್.ಜಿ.ರಾಜಕುಮಾರ, ಪಿ.ಕೆ.ಶ್ರೀನಿವಾಸ, ಶ್ರೀ ಎಚ್.ಎಂ.ಬಸವರಾಜ, ಗಂಗಾಧರ, ಸುರೇಶ ಬಡಿಗೇರ, ಪ್ರಕಾಶ ಹುಗ್ಗಿ, ಜಿ.ನಿಸ್ಸಾರ್ ಅಹ್ಮದ್, ಮಂಜುಳ ಇಳಕಲ್, ಅಹಲ್ಯಾದೇವಿ, ಕವಿತಾರಾಣಿ, ಶ್ರೀಮತಿ ಸುಜಾತ ಅಕ್ಕಿ, ಶೋಭ ವಿ. ಹಾಗೂ ನನ್ನ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರೇರಣೆ ನೀಡಿದ ಎಲ್ಲಾ ಗೆಳೆಯರಿಗೂ ಧನ್ಯವಾದಗಳನ್ನು ಸಲ್ಲಿಸುತ್ತೇನೆ. ಈ ಪ್ರಬಂಧಕ್ಕೆ ಛಾಯಾಚಿತ್ರಗಳನ್ನು ದೊರಕಿಸಿ ಕೊಟ್ಟು, ಸಹಕರಿಸಿದವರಿಗೆ ನಾನು ಅಭಿನಂದಿಸುತ್ತೇನೆ.

ಚರಿತ್ರೆ ವಿಭಾಗದ ಬೋಧಕೇತರ ಸಿಬ್ಬಂದಿಯವರಾದ ಶ್ರೀ ಮರಿಸ್ವಾಮಿ, ಶ್ರೀ ಓಬಯ್ಯ, ಶ್ರೀ ಅಬ್ದುಲ್‌ನಬಿ ಇವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುತ್ತೇನೆ. ಅಕ್ಕರೆಯಿಂದ ಅಕ್ಷರ ಸಂಯೋಜಿಸಿ ಕೊಟ್ಟ ಎ.ಎಂ.ಕೃಪಾಶಂಕರ್ ಮತ್ತು ಶ್ರೀಮತಿ ಬಿ.ರಶ್ಮಿ ಕೃಪಾಶಂಕರ್ ಅವರಿಗೆ ಕೃತಜ್ಞತೆಗಳು.

ಶ್ರೀ ಸುಭಾಷಚಂದ್ರ ದೊಡ್ಡಮನಿ

# ಪರಿವಿಡಿ

ಕವಿರಾಜಮಾರ್ಗಕಾರ ಹೇಳುವಂತೆ ಕಾವೇರಿಯಿಂದ ಗೋದಾವರಿ ನದಿಯವರೆಗೆ ಹಬ್ಬಿದ್ದ ಕರ್ನಾಟಕದ ವಿಶಾಲವಾದ ಭೌಗೋಳಿಕ ಪರಿಸರವು ಅಂದಿನ ನೈಸರ್ಗಿಕ ಹಾಗೂ ರಾಜಕೀಯ ಕಾರಣಗಳಿಂದಾಗಿ, ತನ್ನ ಭೂಪ್ರದೇಶದ ವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳುತ್ತ, ಕುಗ್ಗಿಸಿಕೊಳ್ಳುತ್ತ ಬದಲಾವಣೆ ಹೊಂದಿರುವುದು ಚರಿತ್ರೆಯಿಂದ ಕಂಡುಬರುತ್ತದೆ. ಬನವಾಸಿಯ ಕದಂಬರು, ಬಾದಾಮಿ ಚಾಲುಕ್ಯರು, ಮಾನ್ಯಕೇಟದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ವಿಜಯನಗರದ ಅರಸರು ಬಹುಮನಿ ಸುಲ್ತಾನರು, ಪೋರ್ಚುಗೀಸರು, ಡಚ್ಚರು, ಬ್ರಿಟಿಷ್‌ರು ಹಾಗೂ ಅನೇಕ ಸಣ್ಣಪುಟ್ಟ ಪಾಳೆಯಗಾರರ, ಸರನಾಯಕರ ಆಳ್ವಿಕೆಗೆ ಒಳಪಟ್ಟು ಹೊಸ ಹೊಸ ಧರ್ಮಗಳ ಉದಯಕ್ಕೆ ಹಾಗೂ ಕಲೆ, ಸಾಹಿತ್ಯ, ಸಾಂಸ್ಕೃತಿಗಳ ರಕ್ಷಣೆಗೆ ಹೆಸರುವಾಸಿಯಾದ ಪ್ರದೇಶವಾಗಿದೆ. ಈ ರಾಜ್ಯದ ಪ್ರತಿಯೊಂದು ಹಳ್ಳಿ ಹಳ್ಳಿಗೂ ತನ್ನದೇ ಆದ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆಗಳಿರುವುದು ಇಂದಿನ ಅನೇಕ ಅಧ್ಯಯನಗಳಿಂದ ತಿಳಿದುಬರುತ್ತದೆ. ಕೆಲವೊಂದು ಪ್ರದೇಶಗಳು ಪ್ರಾಗೈತಿಹಾಸಿಕ ಕಾಲದ ಕುರುಹುಗಳಿಂದ ಹಿಡಿದು ಇಂದಿನ ಆಧುನಿಕ ಕಾಲದವರೆಗೂ ಧಾರ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳಿಂದ ದಾಖಲಾರ್ಹವಾಗಿವೆ. ಇದಕ್ಕೆ ಇಂದಿನ ಕಲಬುರ್ಗಿ ಜಿಲ್ಲೆಯೂ ಹೊರತಾಗಿಲ್ಲ.

ಪ್ರಸ್ತುತ ಹೈದರಾಬಾದ್ ಕರ್ನಾಟಕದ ಪ್ರದೇಶವೆಂದು ಗುರುತಿಸಲ್ಪಡುವ ಕಲಬುರ್ಗಿ ಜಿಲ್ಲೆಯು, ಉತ್ತರ ಭಾಗದಲ್ಲಿದ್ದು, ವಿಶಾಲವಾದ ಸಮತಟ್ಟಾದ ಪ್ರದೇಶವನ್ನು ಹೊಂದಿದೆ. ಈ ಭೂಪ್ರದೇಶವು ೭೬°೦೪ ಮತ್ತು ೭೭°೪೨ ಡಿಗ್ರಿ ಪೂರ್ವ ರೇಖಾಂಶ ಹಾಗೂ ೧೬°೧೨ ಮತ್ತು ೧೭°೪೬ ಡಿಗ್ರಿ ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ. ಜಿಲ್ಲೆಯ ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಮತ್ತು ಉಸ್ಮಾನಾಬಾದ್ ಜಿಲ್ಲೆಗಳ ಗಡಿಯನ್ನು ಹೊಂದಿದೆ. ಪೂರ್ವಭಾಗದಲ್ಲಿ ಆಂಧ್ರಪ್ರದೇಶದ ಮೇಡಕ್ ಮತ್ತು ಮೆಹಬೂಬ್‌ನಗರ ಜಿಲ್ಲೆಗಳ ಗಡಿಯನ್ನು ಹೊಂದಿವೆ. ಉತ್ತರದಲ್ಲಿ ಬೀದರ್, ದಕ್ಷಿಣದಲ್ಲಿ ರಾಯಚೂರು ಮತ್ತು ಪಶ್ಚಿಮದಲ್ಲಿ ಬಿಜಾಪುರ ಜಿಲ್ಲೆಗಳು ಕಲಬುರ್ಗಿಯ ಗಡಿ ಭಾಗಗಳಾಗಿವೆ. ಈ ಜಿಲ್ಲೆಯ ದಕ್ಷಿಣ ದಿಕ್ಕಿನಲ್ಲಿ ಹರಿಯುವ ಕೃಷ್ಣನದಿ, ಪಶ್ಚಿಮ ದಿಕ್ಕಿನಲ್ಲಿ ಹರಿಯುವ ಭೀಮಾನದಿಗಳು ಈ ಜಿಲ್ಲೆಗೆ ರಾಯಚೂರು, ಬಿಜಾಪುರ ಜಿಲ್ಲೆಗಳ ನೈಸರ್ಗಿಕ ಮೇರೆಯನ್ನು ಗುರುತಿಸಲಾಗುತ್ತಿದೆ. ಈ ಜಿಲ್ಲೆಗೆ ಕಲಬುರ್ಗಿ ಹಾಗೂ ಗುಲಬರ್ಗಾ ಎಂದು ಎರಡು ಹೆಸರುಗಳಿಂದ ಗುರುತಿಸಲಾಗುತ್ತದೆ. ಗುಲ್ಬರ್ಗಾ ಎಂಬ ಹೆಸರಿನ ಮೂಲದ ಬಗ್ಗೆ ಗ್ಯಾಜೆಟಿಯರ್‌ನಲ್ಲಿ ಈ ಕೆಳಗಿನಂತೆ ಉಲ್ಲೇಖವಾಗಿದೆ. ಕಲಬುರ್ಗಿ, ಗುಲ್ಬರ್ಗಾ ಎಂಬ ಪರ್ಯಾಯ ಹೆಸರುಗಳಿಂದ ಕರೆಯುವ ಈ ಪ್ರದೇಶದ ಚಾರಿತ್ರಿಕ ಉಲ್ಲೇಖವು ಕ್ರಿ.ಶ.೧೨-೧೩ನೇ ಶತಮಾನದ ಚಿನಮಳ್ಳಿ ಶಿಲಾಶಾಸನದಲ್ಲಿ 'ಕಲಂಬರಿಗೆ' ಎಂದು, ಕ್ರಿ.ಶ. ೧೩೯೭ರ ಬೇಲೂರು (ಹಾಸನ ಜಿಲ್ಲೆ) ಹಾಗೂ ಕ್ರಿ.ಶ.೧೫೩೭ರ ಶಿರವಾಳದ ಶಿಲಾಶಾಸನಗಳಲ್ಲಿ 'ಕಲುಬುರಗಿ' ಹಾಗೂ 'ಕಲಬುರಿಗೆ' ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಶಿಯಾನ್ ರಾಯಭಾರಿ ರಝಾಕನು ಇದನ್ನು 'ಕಲಬರ್ಗ್' ಎಂದೇ ಹೇಳಿದ್ದಾನೆ. ಗುಲಬರ್ಗಾ ಎಂಬ ನಾಮ ಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲಬರ್ಗಾ ಎಂಬುದು ಹೆಚ್ಚು ಕಡಿಮೆ ಕಲಬುರಗಿ ಪದದ ಫಾರಸೀಕರಣವಾಗಿದ್ದು, ಫಾರಸಿಯಲ್ಲಿ 'ಗುಲ್' ಎಂದರೆ ಹೂವು, 'ಬರ್ಗ' ಎಂದರೆ ಎಲೆ ಎಂಬ ಅರ್ಥವಿದೆ. ಕಲಬುರಗಿ ಎಂಬ ಅಚ್ಚ ಕನ್ನಡ ರೂಪವೇ ಮಹಮ್ಮದೀಯರಿಗೆ ಮೊದಮೊದಲು 'ಕಲಬುರ್ಗ್' ಎಂದನಿಸಿ ಮುಂದೆ ಅದೇ 'ಗುಲಬರ್ಗಾ' ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ 'ಕಲಬುರಗಿ' ಎಂಬ ಹೆಸರು ಕ್ರಿ.ಶ. ೧೬ನೇ ಶತಮಾನದವರೆಗೂ ರೂಢಿಯಲ್ಲಿದ್ದು ಮುಸ್ಲಿಂರ ಆಡಳಿತ ಪ್ರಭಾವದಿಂದಾಗಿ 'ಗುಲಬರ್ಗಾ' ಎಂಬ ರೂಪವನ್ನು ಪಡೆದು ಪ್ರಚಲಿತದಲ್ಲಿ 'ಕಲಬರ್ಗಿ' ಎಂಬ ಹೆಸರನ್ನು ಉಳಿಸಿಕೊಂಡಿದೆ.

ಕೃಷ್ಣ, ಭೀಮ, ಮುಲ್ಲಾಮಾರಿ, ಕಾಗಿಣಾ, ಬೆಣ್ಣೆತೊರೆ, ಅಮರಜಾ, ಕಾರಂಜಾ ಎಂಬ ಸಪ್ತನದಿಗಳ ಬೀಡು ಎಂದು ಕಲಬುರ್ಗಿ ಜಿಲ್ಲೆಗೆ ಕರೆಯಲಾಗಿದೆ. ಕಲಬುರ್ಗಿ ಜಿಲ್ಲೆಯಲ್ಲಿ ಆಳಂದ, ಅಫಜಲಪೂರ,

ಜೇವರ್ಗಿ, ಶಹಪೂರ, ಸುರಪೂರ, ಯಾದಗಿರಿ, ಚಿತ್ತಾಪೂರ, ಸೇಡಂ ಮತ್ತು ಚಿಂಚೋಳಿ ತಾಲೂಕುಗಳನ್ನು ಒಳಗೊಂಡಿವೆ. ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ೧೯೯೧ರ ಜನಗಣತಿಯ ವರದಿಯಂತೆ ೧೬,೨೨೪ ಚ.ಕಿ.ಮೀ ಇದ್ದು ರಾಜ್ಯದ ಶೇ. ೮.೪೬ರಷ್ಟು ಪ್ರದೇಶವನ್ನು ಒಳಗೊಂಡಿದೆ. ವಿಸ್ತೀರ್ಣದಲ್ಲಿ ಕರ್ನಾಟಕ ರಾಜ್ಯದ ಎರಡನೆಯ ದೊಡ್ಡ ಜಿಲ್ಲೆಯಾಗಿದೆ. ಈ ಜಿಲ್ಲೆಯ ಚರಿತ್ರೆಯು ಪ್ರಾಗೈತಿಹಾಸಿಕ ನೆಲೆಗಳಿಂದ ಆರಂಭಗೊಂಡು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಕಲಬುರ್ಗಿಯು ಸುದೀರ್ಘವಾದ ಚಾರಿತ್ರಿಕ ಹಿನ್ನೆಲೆಯನ್ನು ಇಲ್ಲಿಯ ಅಧ್ಯಯನಕ್ಕೆ ಪೂರಕವಾಗಿ ಸಂಕ್ಷಿಪ್ತ ರೀತಿಯಲ್ಲಿ ಗಮನಿಸಬಹುದಾಗಿದೆ.

ಇಂದಿನ ಕಲಬುರ್ಗಿ ಜಿಲ್ಲೆಯ ಚಿತ್ತಾಪೂರ ತಾಲೂಕಿನಲ್ಲಿರುವ ಭೌದ್ಧರ ಧಾರ್ಮಿಕ ಕೇಂದ್ರವಾದ 'ಸನ್ನತಿ'ಯು ಮೌರ್ಯರ ನಂತರದ ಶಾತವಾಹನರ ಆಳ್ವಿಕೆಯ ಧ್ಯೋತಕವಾಗಿದೆ. ಕ್ರಿ.ಶ. ೯ನೆಯ ಶತಮಾನದಲ್ಲಿ ಬರುವ ರಾಷ್ಟ್ರಕೂಟರು ಸೇಡಂ ತಾಲೂಕಿನ 'ಮಳಖೇಡ'ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ತದ ನಂತರ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಆಳಂದವು 'ಆಳಂದ ಸಾಸಿರ' ಪ್ರಾಂತ್ಯದ ಮುಖ್ಯ ರಾಜಧಾನಿಯಾಗಿರುವುದು ತಿಳಿದುಬರುತ್ತದೆ. ಕಳಚೂರಿಗಳ ದೇವಗಿರಿಯ ಯಾದವರು ದ್ವಾರಸಮುದ್ರದ ಹೊಯ್ಸಳರ ಅಧೀನದಲ್ಲಿದ್ದ ಈ ಪ್ರದೇಶವು ವಾರಂಗಲ್ಲಿನ ಕಾಕತೀಯ ಅರಸರ ಕೈವಶವಾಯಿತು. ಅದೇ ಸಂದರ್ಭದಲ್ಲಿ ದೆಹಲಿಯ ಸುಲ್ತಾನನಾಗಿದ್ದ ಮಹಮ್ಮದ್ ಬಿನ್ ತುಘಲಕನು ದಕ್ಷಿಣ ಭಾರತದ ಮೇಲೆ ದಾಳಿ ಮಾಡಿ ಕಾಕತೀಯರನ್ನು ಸೋಲಿಸಿದನು. ಆಗ ಪ್ರಸ್ತುತ ಕಲಬುರ್ಗಿಯು ಸಹ ಸುಲ್ತಾನರ ಅಧೀನಕ್ಕೆ ಒಳಪಟ್ಟಿತು. ಕ್ರಿ.ಶ. ೧೨೯೪ ರಿಂದ ೧೩೪೭ರವರೆಗೆ ದೆಹಲಿ ಸಾಮ್ರಾಜ್ಯದ ಭಾಗವಾಗಿ ಮುಂದುವರಿಯಿತು. ಕ್ರಿ.ಶ. ೧೩೪೭ರಲ್ಲಿ ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾ 'ಬಹಮನಿ' ರಾಜ್ಯವನ್ನು ಸ್ಥಾಪಿಸಿದಾಗ ಕಲಬುರ್ಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಕ್ರಿ.ಶ. ೧೪೨೪ರವರೆಗೂ ಅಂದರೆ ಎಪ್ಪತ್ತೇಳು ವರ್ಷಗಳ ಕಾಲ ಬಹಮನಿ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆಯಿತು. ಮುಂದೆ ಬಹಮನಿ ರಾಜ್ಯ ಒಡೆದು ಐದು ಭಾಗಗಳಾಗಿ ವಿಂಗಡಣೆಗೊಂಡಾಗ ಇದು ಸ್ವಲ್ಪ ಕಾಲ ಬೀದರಿನ ಬರೀದ್‌ಷಾಹಿ ಸುಲ್ತಾನರ ಅಧೀನಕ್ಕೆ ಮತ್ತೆ ಸ್ವಲ್ಪ ಕಾಲ, ವಿಜಾಪುರದ ಆದಿಲಾಷಾಹಿ ಸುಲ್ತಾನರ ಅಧೀನಕ್ಕೂ ಒಳಪಟ್ಟಿತ್ತು.

ಕ್ರಿ.ಶ. ೧೬೫೭ರಲ್ಲಿ ದಖನ್ನಿನ ರಾಜ್ಯಪಾಲನಾಗಿ ನೇಮಕಗೊಂಡ ಔರಂಗಜೇಬನು ಕಲಬುರ್ಗಿ ನಗರವನ್ನು ಆಕ್ರಮಿಸಿಕೊಂಡು, ಬಿಜಾಪುರ, ಬೀದರ್ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವಷ್ಟರಲ್ಲಿಯೇ ಸುಲ್ತಾನನಾದ ಷಹಜಹಾನನು ಅನಾರೋಗ್ಯ ನಿಮಿತ್ತ ದೆಹಲಿಗೆ ವಾಪಸ್ಸು ಹೋಗುತ್ತಾನೆ. ನಂತರ ಮೊಗಲ್ ಸಾಮ್ರಾಜ್ಯದ ಆಡಳಿತ ಸೂತ್ರವಹಿಸಿಕೊಂಡ ಈತನು ಬಹದ್ದೂರ್

ಖಾನನ್ನು ದಖನ್ನಿನ ರಾಜ್ಯಪಾಲರನ್ನಾಗಿ ನೇಮಿಸುತ್ತಾನೆ. ಬಹದ್ದೂರ್ ಖಾನನು ಸಹ ರಾಜ್ಯ ವಿಸ್ತರಣ ನೀತಿಯನ್ನು ಕೈಗೊಂಡು ಕ್ರಿ.ಶ. ೧೬೭೭ರಲ್ಲಿ ಕಲಬುರ್ಗಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಅಲ್ಲದೆ ಮೊಗಲ್ ಸಾಮ್ರಾಜ್ಯದ ಚಕ್ರವರ್ತಿಯಾದ ಔರಂಗಜೇಬನು ದಕ್ಷಿಣ ಭಾರತದ ದಂಡೆಯಾತ್ರೆ ಕೈಗೊಂಡಾಗ ಕಲಬುರ್ಗಿ ಪ್ರದೇಶವು ಸಂಪೂರ್ಣವಾಗಿ ಮೊಗಲರ ಕೈವಶವಾಗುತ್ತದೆ. ಆದರೆ ಔರಂಗಜೇಬನ ಮರಣಾನಂತರ ಮೊಗಲ್ ಸಾಮ್ರಾಜ್ಯದಲ್ಲಿ ಅಂತಃಕಲಹಗಳು ಸಂಭವಿಸಿದಾಗ, ದಖನ್ನಿನ ಸುಬೇದಾರನಾಗಿದ್ದ ಅಸಫ್‌ಝಾನು ದಕ್ಷಿಣದ ಪ್ರಾಂತ್ಯಾಧಿಪತಿಯಾಗಿ ಇಲ್ಲಿ ಸ್ವತಂತ್ರನಾಗುತ್ತಾನೆ. ಆ ಸಮಯದಲ್ಲಿ ಸುರಪುರ, ಶಹಾಪುರ, ಜೇವರ್ಗಿ ಭಾಗಗಳು ಸೇರಿ ಸುರಪುರದ ನಾಯಕರ ಆಡಳಿತದಲ್ಲಿ ಸ್ವತಂತ್ರ ಸಂಸ್ಥಾನವಾಗಿ ರೂಪತಳೆಯುತ್ತದೆ. ಕಲಬುರ್ಗಿಯ ಉಳಿದ ಭಾಗಗಳು ನಿಜಾಂ ಸಂಸ್ಥಾನಕ್ಕೆ ಸೇರಿದವು.

ನಿಜಾಂ-ಉಲ್-ಮುಲ್ಕ್ ಫಿರೋಜ್ ಜಂಗ್ ಎಂಬ ಬಿರುದನ್ನು ಹೊಂದಿದ, ಮೀರ್ ಕಮುರುದ್ಧೀನ್ ಬಿನ್ ಕಿಲೀಚ್‌ಖಾನ್ ಎಂಬುವವನು ಹೈದರಾಬಾದ್ ನಿಜಾಂ ವಂಶದ ಸಂಸ್ಥಾಪಕನಾಗಿದ್ದಾನೆ. ಈತನಿಗೆ ದೆಹಲಿಯ ಮೊಗಲ್ ಸಾಮ್ರಾಟ ಮಹಮ್ಮದ್ ಶಾಹ ಎಂಬುವವನು 'ಅಸಫ್‌ಜಹಾ' ಎಂಬ ಬಿರುದನ್ನು ನೀಡಿದ್ದರಿಂದ ಈ ಮನೆತನಕ್ಕೆ 'ಅಸಫ್‌ಜಹಾ' ಎಂದು ಕರೆಯುತ್ತಾರೆ. ಔರಂಗಜೇಬನ ಸೇನಾಧಿಪತಿಯಾಗಿದ್ದ ಗಾಜಿಯೋದ್ದೀನ್‌ಖಾನ್‌ನ ಮಗನೆಂದು ಇತಿಹಾಸಕಾರರು ಗುರುತಿಸಿರುವ ಮೀರ್ ಕಮುರುದ್ಧೀನ್-ಬೀನ್-ಕಿಲೀಚ್‌ಖಾನ್ ಹೈದರಾಬಾದ್ ಸಂಸ್ಥಾನದ ಹರಿಕಾರ ನೆನಿಸಿಕೊಂಡಿದ್ದಾನೆ. ಕ್ರಿ.ಶ. ೧೭೪೮ರಲ್ಲಿ ಆರಂಭವಾದ ನಿಜಾಂ ವಂಶದ ಈ ಮೂಲ ಪುರುಷನಿಗೆ ನಾಲ್ಕು ಜನ ಮಕ್ಕಳಿದ್ದರು. ಮೀರ್ ಸಲಾಬತ್‌ಜಂಗ್, ಮೀರ್ ಮಹಮ್ಮದ್‌ಖಾನ್, ನಾಸಿರ್ ಜಂಗ್, ಮೀರ್-ನಿಜಾಂ-ಆಲಿ ಮತ್ತು ಮೀರ್‌ಬಸಾಲತ್ ಜಂಗ್ ಅವರಲ್ಲಿ ನಾಸಿರ್ ಜಂಗ್ ಎಂಬುವವನು ತಂದೆ ಜೀವಂತವಾಗಿದ್ದಾಗಲೇ ಆತನ ವಿರುದ್ಧ ಬಂಡೆದ್ದ. ಅವನ ರಾಜ್ಯದಲ್ಲಿ ಗೊಂದಲವನ್ನುಂಟು ಮಾಡತೊಡಗಿದ್ದ. ಆದರೆ ಈತನ ಹಿರಿಯ ಮಗ ಸಲಾಬತ್ ಜಂಗನು ಫ್ರೆಂಚರ ಸಹಾಯ ಪಡೆದು ೧೭೫೧ರಲ್ಲಿ ಈ ಸಂಸ್ಥಾನದ ಅಧಿಕಾರವನ್ನು ಪಡೆದನು. ಫ್ರೆಂಚರೊಂದಿಗಿನ ಸಲಾಬತ್ ಜಂಗ್‌ನ ಸಂಬಂಧವು ಬಹುಕಾಲ ಉಳಿಯದೇ, ಇಬ್ಬಗೆಯ ನೀತಿಯಿಂದ ಫ್ರೆಂಚರು ನಿಜಾಮ್-ಉಲ್-ಮುಲ್ಕ್‌ನ ಅಣ್ಣನ ಮಗನಾದ ಮುಜಫರ್ ಜಂಗ್‌ನನ್ನು ಹೈದರಾಬಾದ್ ಸಿಂಹಾಸನದ ಮೇಲೆ ಕೂಡಿಸುತ್ತಾರೆ. ಆದರೆ ಮುಜಫರ್ ಜಂಗ್‌ನು ಪಾಂಡಿಚೇರಿಯಿಂದ ವಾಪಸ್ಸು ಬರುವ ಕಾಲಕ್ಕೆ ಕೊಲ್ಲಲ್ಪಟ್ಟಾಗ ಸಲಾಬತ್‌ಜಂಗನು ಫ್ರೆಂಚ್ ಸೇನಾಧಿಪತಿಯಾಗಿದ್ದ ಮೇಜರ್ ಬುಸ್ಸೆ ಎಂಬುವನ ಸಹಾಯ ಪಡೆದು ಮತ್ತೆ ಹೈದರಾಬಾದ್ ರಾಜ್ಯಪಟ್ಟಕ್ಕೆ ಬಂದ. ತನ್ನ ಸಹೋದರನಾದ ನಿಜಾಮ

ಆಲಿಯನ್ನು ತನ್ನ ಅಧೀನದಲ್ಲಿ ವರ್ಹ್ಹಾಡದ ಸುಬೇದಾರನನ್ನಾಗಿ ನೇಮಿಸಿಕೊಳ್ಳುತ್ತಾನೆ. ಒಟ್ಟಾರೆಯಾಗಿ ಕ್ರಿ.ಶ.೧೭೨೪ ರಿಂದ ೧೯೪೮ರವರೆಗೆ ಏಳು ಜನ ನಿಜಾಂರು ಹೈದರಾಬಾದ್ ಸಂಸ್ಥಾನವನ್ನು ಆಳಿದರು. ಅವರನ್ನು ಈ ಕೆಳಗಿನಂತೆ ಹೆಸರಿಸಲಾಗಿದೆ.

೧. ಮೀರ್ ಕಮುರಿದ್ದೀನ್ ಬಿನ್ ಕಿಲೀಚ್‌ಖಾನ್ ೧೭೨೪-೧೭೪೮
೨. ನವಾಬ್ ನಿಜಾಮ ಆಲೀಖಾನ್ ೧೭೬೨-೧೮೦೩
೩. ಮೂರನೆ ನಿಜಾಂ ಸಿಕಂದರ್‌ಶಾಹ ೧೮೦೩-೧೮೨೯
೪. ನಾಲ್ಕನೇ ನಿಜಾಂ ನಾಸಿರುದ್ದೌಲ್ ಬಹಾದ್ದೂರ್ ೧೮೨೯-೧೮೫೭
೫. ಐದನೇ ನಿಜಾಂ ಅಫಜುಲುದ್ದೌಲ್ ಬಹಾದ್ದೂರ್ ೧೮೫೭-೧೮೬೯
೬. ಆರನೇ ನಿಜಾಂ ಮೀರ್ ಮಹಬೂಬ್ ಆಲಿ ೧೮೬೯-೧೯೧೧
೭. ಏಳನೇ ನಿಜಾಂ ಮೀರ್ ಉಸ್ಮಾನ್ ಆಲೀಖಾನ್ ೧೯೧೧-೧೯೪೮

ನಿಜಾಂ ವಂಶದ ಏಳು ಜನ ರಾಜರು ಅಧಿಕಾರಕ್ಕಾಗಿ ತಿಕ್ಕಾಟಗಳು ನಡೆಯುತ್ತಿದ್ದು, ಒಬ್ಬರವಿರುದ್ಧ ಇನ್ನೊಬ್ಬ ಬಂಡೇಳುವ ಪ್ರವೃತ್ತಿ ಹೊಂದಿದರು. ಇವರು ರಕ್ತ ಸಂಬಂಧಗಳನ್ನು ಕಡಿದು ಕೊಲೆ ಮಾಡುವ ಹೀನಾಯ ಕೆಲಸಕ್ಕೆ ಕೈ ಹಾಕುತ್ತಿದ್ದರು. ತಮ್ಮ ತಮ್ಮ ಸ್ವಪ್ರತಿಷ್ಠೆಗಳನ್ನು ಉಳಿಸಿಕೊಳ್ಳಲು ಒಮ್ಮೆ ಫ್ರೆಂಚರ, ಮತ್ತೊಮ್ಮೆ ಬ್ರಿಟೀಷ್‌ರ ಸಹಾಯ ಪಡೆಯುತ್ತಿದ್ದರು. ಇವರು ಕೊನೆ ಕೊನೆಗೆ ಬ್ರಿಟೀಷರ ಕೈವಶದಲ್ಲಿಯೇ ಆಡಳಿತ ನಡೆಸಬೇಕಾದಂತಹ ಪರಿಸ್ಥಿತಿ ತಲೆದೋರಿತು. ಏಳನೆಯ ನಿಜಾಂನಾದ ಮೀರ್ ಉಸ್ಮಾನ್ ಆಲಿಖಾನ್ ಬಹಾದ್ದೂರ ಆಗಸ್ಟ್ ೨೯, ೧೯೧೧ರಲ್ಲಿ ಅಧಿಕಾರಕ್ಕೆ ಬಂದಾಗ ಸರ್ ವಿಲಿಯಂ ಬಾರ್ಟ್‌ರ್ ಎಂಬುವವನು ಅಲ್ಲಿಯ ಇಂಗ್ಲಿಷ್ ರೆಸಿಡೆಂಟನಾಗಿ ನೇಮಕ ಗೊಂಡಿರುತ್ತಾನೆ. ಆತನ ಪ್ರಕಾರ ನಿಜಾಂ ರಾಜ್ಯಕ್ಕೆ ಬ್ರಿಟೀಷ್‌ರ ರಕ್ಷಣೆಯಿಲ್ಲದೆ ಹೋದರೆ ಮರಾಠರು ಆ ರಾಜ್ಯವನ್ನು ಕಬಳಿಸುತ್ತಿದ್ದರು. ಆ ಕಾರಣಕ್ಕೆ ನಿಜಾಂನ ಒಳಾಡಳಿತದಲ್ಲು ಕೈತೂರಿಸಿ ಅನೇಕ ವಿವಾದಗಳಲ್ಲಿ ಮಧ್ಯಸ್ಥಿಕೆ ವಹಿಸುತ್ತಿದ್ದರು. ಅಲ್ಲದೇ ಸಹಾಯಕ ಸೈನ್ಯ ಪದ್ಧತಿಗೆ ಒಳಪಟ್ಟ ನಿಜಾಂರು ಬ್ರಿಟೀಷರ ಮಾಂಡಳಿಕರಾಗಿ ಕೆಲಸ ಮಾಡುತ್ತಿದ್ದರು. ಆರ್ಥಿಕ ವ್ಯವಹಾರದಲ್ಲಿ ಕೈ ಹಾಕಿದ ಅವರು ನಿಜಾಂನಿಂದ ತೆರಿಗೆ ವಸೂಲಿ ಮಾಡುತ್ತಿದ್ದರಲ್ಲದೆ, ಸಂಬಂಧಪಟ್ಟ ಕೆಲಸಕ್ಕೆ ಬ್ರಿಟೀಷ್ ಅಧಿಕಾರಿಯನ್ನು ನೇಮಿಸುವ ಪದ್ಧತಿಯನ್ನು ಜಾರಿಗೆ ತಂದಿದ್ದರು. ಹೀಗೆ ರಾಜಕೀಯ, ಆರ್ಥಿಕ ಸುಧಾರಣೆಗಳನ್ನು ಕೈಗೊಳ್ಳುವಲ್ಲಿ ನಿಜಾಂರಿಗೆ ಯಾವುದೇ ಸ್ವತಂತ್ರಗಳಿರಲಿಲ್ಲ.

ಕಲಬುರ್ಗಿ ಜಿಲ್ಲೆಯು ಸಹ ನಿಜಾಂನ ಮೂಲಕ ಪರೋಕ್ಷವಾಗಿ ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿತ್ತು. ಅಂದಿನ ಸ್ವಾತಂತ್ರ್ಯ ಭಾರತದ ಸಂದರ್ಭದಲ್ಲಿ ಹೈದರಾಬಾದ್ ರಾಜ್ಯವು ದೇಶಿಯ ರಾಜ್ಯಗಳ ಪೈಕಿ ಅತೀ ದೊಡ್ಡರಾಜ್ಯವಾಗಿತ್ತು. ಇದರಲ್ಲಿ ತೆಲಂಗಣ, ಮರಾಠವಾಡ, ಮತ್ತು ಕರ್ನಾಟಕಗಳೆಂಬ ಮೂರು ಭಾಷಾವಾರು ಪ್ರಾಂತ್ಯಗಳು ಸೇರಿದವು. ಇಂದಿನ ಆಂಧ್ರಪ್ರದೇಶದ ಆದಿಲ್‌ಬಾದ್, ಕರೀಂನಗರ, ನಿಜಾಂಬಾದ್, ವಾರಂಗಲ್, ಹೈದರಾಬಾದ್, ನಲ್ಗೊಂಡಾ ಜಿಲ್ಲೆಗಳು ಮಹಾರಾಷ್ಟ್ರದ ಔರಂಗಬಾದ್, ಪರಭಣಿ, ಬೀಡ್, ಉಸ್ಮಾನಾಬಾದ್, ನಾಂದೇಡ್ ಜಿಲ್ಲೆಗಳು ಹಾಗೂ ಕರ್ನಾಟಕದ ಬೀದರ್, ಕಲಬುರ್ಗಿ, ರಾಯಚೂರು ಈಗಿನ ಕೊಪ್ಪಳ ಜಿಲ್ಲೆಗಳು ಹೈದರಾಬಾದ್ ನಿಜಾಂರಗಳ ನಿರಂಕುಶ ಆಡಳಿತಕ್ಕೆ ಒಳಪಟ್ಟಿದ್ದವು. ಆದರೆ ಕಲಬುರ್ಗಿ ಜಿಲ್ಲೆಯ ಸುರಪುರ, ಶಹಾಪುರ, ಜೀವರ್ಗಿ ತಾಲೂಕುಗಳನ್ನು ಕ್ರಿ.ಶ. ೧೭೦೭ ರಿಂದ ೧೮೫೭ರವರೆಗೆ ಸುರಪುರದ ನಾಯಕರು ಆಳುತ್ತಿದ್ದರು. ಆದರೆ ೧೮೫೭ರ ಕ್ರಾಂತಿಯಲ್ಲಿ ರಾಜಾ ವೆಂಕಟಪ್ಪ ನಾಯಕನು ಮಡಿದ ನಂತರ ಬ್ರಿಟೀಷರು ಈ ಭಾಗಗಳನ್ನು ಹೈದರಾಬಾದ್ ನಿಜಾಂನಾದ ಉಸ್ಮಾನ್‌ಅಲಿಖಾನನ ವಶಕ್ಕೆ ಬಿಟ್ಟುಕೊಟ್ಟರು ೧೮೫೭ರಲ್ಲಿ ಸೀಪಾಯಿದಂಗೆ ನಡೆದ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪೇಶ್ವೆ ನಾನಾಸಾಹೇಬ್, ಕೆಂಚನಗೌಡ, ಮುಂಡರಗಿ ಭೀಮರಾವ, ಸುರಪುರದ ರಾಜಾ ವೆಂಕಟಪ್ಪ ನಾಯಕ ಇವರುಗಳು ಭಾಗವಹಿಸಲು ನಿರ್ಧರಿಸಿದರೆ, ನಿಜಾಂನು ಮಾತ್ರ ಇವರಿಂದ ದೂರ ಉಳಿದು ಕ್ರಾಂತಿಯ ಯೋಜನೆಗಳನ್ನು ಗುಪ್ತಚಾರರ ಮೂಲಕ ಬ್ರಿಟೀಷ್‌ರಿಗೆ ಮುಟ್ಟಿಸುತ್ತಿದ್ದ. ಅಲ್ಲದೆ ಕ್ರಾಂತಿಯನ್ನು ದಮನ ಮಾಡುವಲ್ಲಿ ವಿದೇಶಿಯರ ಜೊತೆ ಕೈಗೂಡಿಸಿ, ಬ್ರಿಟೀಷರೆಂಬ ಅಂಕುಶದಿಂದ ಸಣ್ಣಪುಟ್ಟ ಸಂಸ್ಥಾನಗಳನ್ನು ಸದೆಬಡಿಯುತ್ತಿದ್ದನು. ಹೀಗಾಗಿ ೧೮೫೭ರ ಸ್ವಾತಂತ್ರ್ಯ ಹೋರಾಟದಲ್ಲಿ, ಹೈದರಾಬಾದ್ ಸರಕಾರದ ಪ್ರತಿನಿಧಿ ಸಾಲಾರ್ ಜಂಗನು ಇಂಗ್ಲೀಷ್‌ರಿಗೆ ಸಹಾಯ ಮಾಡಿದ. ಕಾರಣ ಈ ಭಾಗದಲ್ಲಿ ಸಿಪಾಯಿ ದಂಗೆಗಳು ಯಾವುದೇ ಪ್ರಭಾವವನ್ನುಂಟು ಮಾಡಲಿಲ್ಲ.

ಏಳನೇ ನಿಜಾಂನಾದ ಮೀರ್ ಉಸ್ಮಾನ್ ಅಲಿಖಾನನು ೧೯೧೧ರಿಂದ ೧೯೪೮ರವರೆಗೆ ಸುದೀರ್ಘವಾದ ಆಳ್ವಿಕೆ ನಡೆಸುತ್ತ, ಅಕ್ಬರ್ ಹೈದರಿ, ಸರ್ ಮಿರ್ಜಾ ಇಸ್ಮಾಯಿಲ್ ಚಟ್ಟಾರಿಯ ನವಾಬ ಮತ್ತು ಮಿರ್‌ಲಿಯಾಖಾನ್ ಅಲಿ ಎಂಬ ಪ್ರಧಾನ ಮಂತ್ರಿಯನ್ನು ನೇಮಿಸಿಕೊಂಡಿರುತ್ತಾನೆ. ಈ ಸಂದರ್ಭದಲ್ಲಿ ರೂಪ ತಳೆದ ಮಜ್ಲೀಸ್-ಎ-ಇತ್ತೆಹಾದ್-ಉಲ್ ಮುಸ್ಲಿಮೀನ್ ಸಂಸ್ಥೆಯು ನವಾಬ್ ಬಹಾದ್ದೂರ್ ಯಾರಜಂಗ್ ಮತ್ತು ಕಾಸಿಂ ರಜ್ವಿ ಎಂಬ ಕೋಮುವಾದಿ ಕ್ರಿಯಾತ್ಮಕ ಕಾರ್ಯಕರ್ತರಿಂದ ಹಿಂದೂ ಜನತೆಯ ಮೇಲೆ ದಬ್ಬಾಳಿಕೆ, ಅತ್ಯಾಚಾರ ನಡೆಸಿದವು. ಹೈದರಾಬಾದ್ ನಿಜಾಂನಿಗೆ ರಾಜಕೀಯ ಚಾಣಕ್ಷತನವಾಗಲಿ, ಮುತ್ಸದ್ದಿತನವಾಗಲಿ ಹಾಗೂ ಸೈನ್ಯದ ಜ್ಞಾನವಾಗಲಿ ಇರಲಿಲ್ಲ. ಕಾರಣ

ಇತ್ತೆಹಾದ್ ಸಂಸ್ಥೆಯ ಕಾರ್ಯಕರ್ತರು ನಿಜಾಂನನ್ನು ತಮ್ಮ ರಾಜಕೀಯ ಹಾಗೂ ಧಾರ್ಮಿಕ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳುತ್ತಿದ್ದರು.

ಕಾಲಕ್ರಮೇಣ ಇತ್ತೆಹಾದ್ ಸಂಸ್ಥೆಯು ಇಡೀ ಹೈದರಾಬಾದ್ ಪ್ರಾಂತ್ಯವನ್ನು ಮುಸ್ಲಿಂ ರಾಜ್ಯವನ್ನಾಗಿ ನಿರ್ಮಿಸುವ ಭರಾಟೆಯಲ್ಲಿ ಹಿಂದೂ ಜನಾಂಗದ ರಕ್ತದೋಳಿಯನ್ನು ಆಡಿತು. ನಿಜಾಂನು ಜನರ ಸ್ಥಿತಿಗತಿಗಳನ್ನು ನೋಡದೆ ಕೇವಲ ವಿಲಾಸಿ ಪ್ರವೃತ್ತಿಯಲ್ಲಿ ಕಾಲ ಕಳೆಯುತ್ತಿದ್ದನು. ಇತ್ತ ಕಾಸಿಂ ರಜ್ವಿಯ ಅತಿರೇಕದ ಕೆಲಸಗಳು ಮುಗ್ಧ ಹಿಂದೂ ಜನರ ಮಾನಪ್ರಾಣ ಕಳೆಯುವವರ ಮೂಲಕ ಸಾಮ್ರಾಜ್ಯದಲ್ಲಿ ವಿಷಮತೆಯನ್ನು ಸೃಷ್ಟಿಸಿದನು. ಇತ್ತೆಹಾದ್ ಸಂಸ್ಥೆಯ ಮೂಲಕ ಇಡೀ ಮುಸ್ಲಿಂ ವಿಶ್ವಕ್ಕೆ ರಾಜನಾಗುವ ಕನಸು ಕಾಣುತ್ತಿದ್ದನು. ನಿಜಾಂನು ಹಿಂದೂಗಳ ಧಾರ್ಮಿಕ ಸ್ವಾತಂತ್ರ್ಯವನ್ನು ಕಸಿದುಕೊಂಡನು. ದೇವಾಲಯ ನಿರ್ಮಿಸುವ, ಶ್ರಾವಣಮಾಸದಲ್ಲಿ ಧಾರ್ಮಿಕ ಕಾರ್ಯಗಳನ್ನು ನೇರವೇರಿಸುವ ಕಾರ್ಯಗಳನ್ನು ತಡೆಹಿಡಿದನು. ಗಣೇಶನ ಹಬ್ಬ, ಬಸವಜಯಂತಿಗಳನ್ನು ನಿಷೇಧಿಸಿದನು. ಕಲಬುರ್ಗಿಯ ಶ್ರೀ ಶರಣಬಸವೇಶ್ವರ ದೇವಾಲಯದ ಗೋಪುರದ ಮೇಲೆ ಕಳಸ ಸ್ಥಾಪಿಸಲು ಅನುಮತಿಯನ್ನು ಸಹ ನೀಡಲಿಲ್ಲ. ಮೇಲಾಗಿ ಶೋಷಿತ ಹಿಂದೂಗಳನ್ನು ಮತಾಂತರಿಸುವ ಪ್ರಕ್ರಿಯೆಗೆ ಕೈಹಾಕಿದನು. ಪ್ರತಿ ಹಳ್ಳಿಹಳ್ಳಿಗೂ ರಜಾಕಾರರ ದಾಳಿ ನಡೆಯುತ್ತಿತ್ತು. ಹಿಂದೂ ದೇವಾಲಯಗಳನ್ನು ಕೆಡವಿ ಮಸೀದಿಗಳನ್ನು ಕಟ್ಟಿಸುವ ಕಾರ್ಯ ನಡೆಯುತ್ತಿದ್ದವು. ಹೆಂಗಸರ ಮತ್ತು ಹಸುಗೂಸುಗಳ ಪ್ರಾಣದ ಜೊತೆಗೆ ಚಲ್ಲಾಟವಾಡುವ ಕ್ರೂರ ಕೃತ್ಯಕ್ಕೆ ಇವರು ಕೈಹಾಕಿದರು. ಹೀಗೆ ಕೋಮುವಾದವನ್ನೇ ತಮ್ಮ ಮೈಯ ರಕ್ತವನ್ನಾಗಿಸಿಕೊಂಡಿದ್ದ ರಜಾಕಾರರು ಜನತೆಯ ಮೇಲೆ ದಬ್ಬಾಳಿಕೆ ಮಾಡುತ್ತಿದ್ದರು. ಸ್ವಾತಂತ್ರ್ಯ ಭಾರತದಲ್ಲಿ ವಿಲೀನಗೊಳ್ಳದೇ ಸ್ವತಂತ್ರ ಮುಸ್ಲಿಂ ರಾಜ್ಯ ಉಳಿಸಿಕೊಳ್ಳಬೇಕೆಂದು ನಿಜಾಂನ ಆಶೆಯಾಗಿತ್ತು. ಇವನ ಉದ್ದೇಶ ತಿಳಿದ ಹೈದರಾಬಾದ್ ವಿಮೋಚನಾ ಹೋರಾಟಗಾರರು ನಿಜಾಂನ ವಿರುದ್ಧ ಹೋರಾಡಲು ಮುಂದೆ ಬಂದರು. ಮುಳ್ಳನ್ನು ಮುಳ್ಳಿನಿಂದ ತೆಗೆಯಬೇಕು ಎಂಬ ಗಾದೆ ಮಾತಿನಂತೆ ಹಿಂಸೆಯನ್ನು ಹಿಂಸೆಯಿಂದಲೇ ಗೆಲ್ಲಬೇಕು ಎಂಬ ಧೋರಣೆ ಹೊಂದಿದ್ದರು. ವಿಮೋಚನಾ ಹೋರಾಟಗಾರರು ಗಡಿ ಶಿಬಿರಗಳನ್ನು ರಚನೆ ಮಾಡಿಕೊಂಡರು. ವೀರಾವೇಶದಿಂದ ಹೋರಾಡಿ ಕೊನೆಗೂ ಮತಾಂಧ ಮುಸ್ಲಿಂ ಶಕ್ತಿಗಳಿಂದ ಹೈದರಾಬಾದ್ ಪ್ರದೇಶವನ್ನು ನಿಜಾಂನಿಂದ ಮುಕ್ತಿಗೊಳಿಸಿದರು. ಆ ಪ್ರಯುಕ್ತ ಕಲಬುರ್ಗಿ ಜಿಲ್ಲೆಯ ಹೋರಾಟದ ಕ್ರಮಗಳನ್ನು ಹಾಗೂ ಗಡಿ ಶಿಬಿರಗಳನ್ನು ಕುರಿತಾಗಿ ನನ್ನ ಅಧ್ಯಯನದಲ್ಲಿ ತೋಡಗಿಸಿಕೊಂಡಿರುತ್ತೇನೆ.

ಹೈದರಾಬಾದ್ ಪ್ರಾಂತ್ಯದ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದರೆ, ಆಳರಸರಿಂದ ಹಿಂದೂ ಪ್ರಜೆಗಳ ಮೇಲೆ ದಬ್ಬಾಳಿಕೆ, ಅತ್ಯಾಚಾರ ಮತ್ತು ನಿರಕುಂಶ ಪ್ರಭುತ್ವವನ್ನು ಕಾಣುತ್ತೇವೆ. ಹೈದರಾಬಾದ್ ಪ್ರಾಂತ್ಯವು ಭಾರತ ಒಕ್ಕೂಟಕ್ಕೆ ಸೇರಿಸದೇ, ಪ್ರತ್ಯೇಕ ಮುಸ್ಲಿಂ ರಾಷ್ಟ್ರವನ್ನಾಗಿ ಮಾಡುತ್ತೇನೆ ಎಂದು ಹೈದರಾಬಾದ್ ನಿಜಾಂನಾದ ಮೀರ್ ಉಸ್ಮಾ ಆಲಿಖಾನ್ ಘೋಷಿಸಿದನು. ಈ ನೀತಿಯಿಂದ ಹೈದರಾಬಾದ್ ಕರ್ನಾಟಕದ ಅನೇಕ ಭಾಗಗಳಲ್ಲಿ ಸತ್ಯಾಗ್ರಹ ಹಾಗೂ ಚಳುವಳಿಗಳು ನಿಜಾಂನ ವಿರುದ್ಧ ಸ್ವಾತಂತ್ರ್ಯ ಹೋರಾಟಗಾರರು ಹೈದರಾಬಾದ್ ಪ್ರಾಂತ್ಯದ ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಿಸಲು ಶ್ರಮಿಸಿದರು. ಅನೇಕ ದೇಶ ಪ್ರೇಮಿಗಳು ಮುಂದೆ ಬಂದು ವಿಮೋಚನಾ ಹೋರಾಟಗಾರರಿಗೆ ಸಹಾಯ ಮಾಡತೊಡಗಿದರು. ಪ್ರತಿ ಗ್ರಾಮಗಳಲ್ಲಿಯೂ ನಿಜಾಂನ ಆಡಳಿತವನ್ನು ಧಿಕ್ಕರಿಸತೊಡಗಿದರು. ಇದನ್ನರಿತ ನಿಜಾಂನು ತನ್ನ ಅನುಯಾಯಿಯಾದ ಕಾಸಿಂ ರಜ್ವಿಯನ್ನು ಲಾತೂರಿನಿಂದ ಕರೆಸಿ ಅವನಿಂದ 'ರಜಾಕಾರ' ಎಂಬ ''ಮುಸ್ಲಿಂ ಸ್ವಯಂ ಸೇವಕ'' ಸಂಘ ಕಟ್ಟಿಸಿದನು. ನಿಜಾಂನಿಂದ ಸಂಪೂರ್ಣ ಸ್ವತಂತ್ರ ಪಡೆದು ರಜಾಕಾರರು ಹೈದರಾಬಾದ್ ಪ್ರಾಂತ್ಯಗಳಲ್ಲಿ ಅನೇಕ ಕೊಲೆ, ಸುಲಿಗೆ, ದರೋಡೆ, ಮಹಿಳೆಯರ ಮೇಲೆ ಅತ್ಯಾಚಾರ ಮಾಡಲಾರಂಭಿಸಿದರು. ಕಾಸಿಂರಜ್ವಿಯು ಈ ಭಾಗದ ಜನತೆಗೆ ರಕ್ತದ ಕಣ್ಣೀರು ಹರಿಸಿದನು. ಹೈದರಾಬಾದ್ ಪ್ರಾಂತ್ಯದ ಜನತೆ ನಿಜಾಂನ ಕಪಿಮುಷ್ಟಿಯಲ್ಲಿರಬೇಕೆನ್ನುವುದೇ ರಜಾಕಾರರ ಮುಖ್ಯ ಉದ್ದೇಶವಾಗಿತ್ತು. ಇದನ್ನು ಸಹಿಸದ ಜನತೆ

ನಿಜಾಂನ ವಿರುದ್ಧ ಹೋರಾಡಲು ಅಹಿಂಸಾಮಾರ್ಗವನ್ನು ಹಿಡಿದರು. ಕೆಲವು ವಿಮೋಚನಾ ಹೋರಾಟಗಾರರು ಹೈದರಾಬಾದ್ ಗಡಿ ಭಾಗಗಳಲ್ಲಿ ಗಡಿ ಶಿಬಿರಗಳನ್ನು ಸ್ಥಾಪಿಸಿ, ನೊಂದ ಜನತೆಗೆ ಧೈರ್ಯ ಹೇಳತೊಡಗಿದರು. ಮನೆ, ಆಸ್ತಿ, ಒಡವೆ ಕಳೆದುಕೊಂಡ ಜನರನ್ನು ಶಿಬಿರಗಳಲ್ಲಿ ಆಶ್ರಯ ಕೊಡಲಾರಂಭಿಸಿದರು.

ಹೈದರಾಬಾದ್ ಕರ್ನಾಟಕ ಪ್ರದೇಶದ ಸ್ಥಿತಿಗತಿಗಳ ಬಗೆಗೆ ತಿಳಿಸುವ ಅನೇಕ ಇತಿಹಾಸ ಗ್ರಂಥಗಳು ದೊರೆಯುತ್ತವೆ. ಇದುವರೆಗೆ ಈ ವಿಷಯ ಕುರಿತಾಗಿ ಬಿ.ಸಿ.ಮಹಾಬಲೇಶ್ವರಪ್ಪ ಅವರ ''ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು'', ಧ್ರುವನಾರಾಯಣರವರ(ಸಂ) ''ಸ್ವಾತಂತ್ರ್ಯದೋಳ'' ಎಂಬ ಕೃತಿ, ಡಾ.ಸೂರ್ಯನಾಥ ಕಾಮತ್‌ರವರ(ಸಂ) ''ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'', ರಾಮಣ್ಣ ಹವಳೆಯವರ ''ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ''. ಡಾ.ಸಿ.ಎಂ.ಚುರ್ಚಿಹಾಳ ಮಠ(ಸಂ) ''ಮುಂಡರಗಿ ನಾಡ ಸ್ವಾತಂತ್ರ್ಯಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನಾ ಹೋರಾಟ'', ಗೋಪಾಲರಾವ ಹೇಜೀಬ್‌ರವರ(ಲೇ) ''ಹೈದರಾಬಾದ್ ಮುಕ್ತಿ ಸಂಘರ್ಷ'', ನಲವಡಿ ಶ್ರೀಕಂಠಶಾಸ್ತ್ರಿಯವರ ''ಹೈದರಾಬಾದ್ ರಜಾಕಾರರ ಲಾವಣಿ'', ಕಾ.ಶ್ರೀ. ನಾಗರಾಜ ಅವರ ''ಹೈದರಾಬಾದ್ ಮುಕ್ತಿ ಗಾದೆ'', ಸ್ವಾಮಿ ರಮಾನಂದ ತೀರ್ಥರ ಇಂಗ್ಲಿಷ್‌ದ(ಮೂಲ) ಸೂರ್ಯನಾಥ ಕಾಮತ್ (ಅನು) ''ಹೋರಾಟದ ನೆನಪುಗಳು'', ವಿ.ಎಚ್.ದೇಸಾಯಿಯವರ ''ವಂದೇಮಾತರಂ ದಿಂದ ಜನಗಣಮನ''ದವರೆಗೆ ಅವರದೇ ''ನೆತ್ತರು ಬಸಿದವರ ವೀರಗಾಥೆ'', ಅನಂತ ಭಾಲೇರಾವ್‌ರವರ (ಲೇ) ''ಹೈದರಾಬಾದ್ ಸ್ವಾತಂತ್ರ್ಯ ಸಂಗ್ರಾಮ್ ಆಣಿ ಮರಾಠವಾಡ್'' ಎಂಬ ಮರಾಠಿ ಪುಸ್ತಕ, ಅಮರೇಶ ನುಗಡೋಣಿ(ಲೇ), ''ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್ ವಿಮೋಚನಾ ಚಳುವಳಿ'', ಎಸ್.ಆರ್.ರಾಮಸ್ವಾಮಿ(ಲೇ) ''ಸ್ವಾತಂತ್ರ್ಯದ ಮೈಲಿಗಲ್ಲುಗಳು'', ವಂದೇ ಮಾತರಂ ರಾಮಚಂದ್ರರಾವ್ (ಸಂ) ''ಆರ್ಯ ಸತ್ಯಾಗ್ರಹದರ್ಶನ'' ಎಂಬ ಹಿಂದಿ ಪುಸ್ತಕ, ಸುಧೀರದೇಶಪಾಂಡೆ(ಲೇ) ''ಮರಾಠವಾಡಾ ಮುಕ್ತಿ ಸಂಗ್ರಾಮ, ಏಕ್ ಮಾಂಗೋವಾ'' ಎಂಬ ಮರಾಠಿ ಪುಸ್ತಕ, ತುಕರಾಮಯೇರಸಕರ್(ಸಂ) ''ಸ್ಮಾರಿಕಾ ಸ್ಮರಣ ಸಂಚಿಕೆ'' ಮುಂತಾದವುಗಳನ್ನು ಗಮನಿಸಬಹುದಾಗಿ. ಆದರೂ ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟದ ಸ್ವರೂಪ ಹಾಗೂ ಗಡಿ ಶಿಬಿರಗಳ ಕುರಿತಾದ ಪ್ರತ್ಯೇಕವಾದ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ಆದರೆ ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಗಡಿ ಶಿಬಿರಗಳ ಪಾತ್ರ ಕುರಿತಾಗಿ ಪ್ರಸ್ತುತ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಉದ್ದೇಶಗಳು

ಕಲಬುರ್ಗಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ ಹಾಗೂ ನಿಜಾಂ ಸಂಸ್ಥಾನದ ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡುವುದು ಮತ್ತು ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ

ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳ ಪಾತ್ರ ಕುರಿತು ಸಮಗ್ರ ಅಧ್ಯಯನ ಕೈಗೊಳ್ಳುವುದು ಈ ಪ್ರಬಂಧ ಮುಖ್ಯ ಉದ್ದೇಶವಾಗಿದೆ. ಶಿಬರಗಳ ಹುಟ್ಟು, ಬೆಳವಣಿಗೆ ಹಾಗೂ ಸಾಧನೆಗಳನ್ನು ಗುರುತಿಸುವುದು ಅಧ್ಯಯನದ ಮೂಲ ಉದ್ದೇಶವಾಗಿದೆ. ವಿಮೋಚನಾ ಹೋರಾಟದಲ್ಲಿ ಪತ್ರಿಕೆಗಳು, ಬುಲಾಯಿ ಹಾಡುಗಳು, ಕೀರ್ತನೆಗಳು, ಲಾವಣಿಗಳು ಹೇಗೆ ಕಾರ್ಯನಿರ್ವಹಿಸಿವೆ ಎಂಬುದನ್ನು ತಿಳಿದುಕೊಳ್ಳುವ ಮುಖ್ಯ ಉದ್ದೇಶವಾಗಿದೆ. ನಿಜಾಂ ಹಾಗೂ ರಜಾಕಾರರ ಹಾವಳಿಗೆ ತುತ್ತಾದ ಅನೇಕ ಗ್ರಾಮಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವುದು ಹಾಗೂ ರಜಾಕಾರರ ವಿರುದ್ಧ ಹೋರಾಡಿದ ವಿಮೋಚನಾ ಹೋರಾಟಗಾರರನ್ನು ಪರಿಚಯಿಸುತ್ತಾ ಅವರ ಧೈರ್ಯ, ಸಾಹಸ ಮತ್ತು ಬಲಿದಾನಗಳು ಪ್ರಸ್ತುತವಾಗ ಮರೆಯಾಗುತಿತವೆ. ಅದನ್ನು ಈ ಅಧ್ಯಯನದಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನಕ್ಕೆ ಪೂರಕ ಆಕರ ಸಾಮಗ್ರಿಗಳನ್ನಾಗಿ ಗ್ರಂಥಗಳನ್ನು ವಿವಿಧ ವಿದ್ವಾಂಸರ ಲೇಖನಗಳನ್ನು ಬಳಸಿಕೊಂಡು ವಿಮೋಚನಾ ಹೋರಾಟಗಾರರನ್ನು ಸಂದರ್ಶಿಸಿ ಮತ್ತು ಕ್ಷೇತ್ರಕಾರ್ಯದ ಮೂಲಕ ಶಿಬಿರಗಳು ಏರ್ಪಟ್ಟಿದ ಸ್ಥಳಗಳಿಗೆ ಭೇಟಿ ನೀಡಿ ವಿಷಯವನ್ನು ಸಂಗ್ರಹಿಸಲಾಗುತ್ತದೆ. ಸಂಗ್ರಹಿಸಿದ ಮಾಹಿತಿಯನ್ನು ಆಯಾ ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ಹೋರಾಟದ ಸ್ವರೂಪ ರೀತಿ ನೀತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಈ ನನ್ನ ಅಧ್ಯಯನದ ಪ್ರಸ್ತುತ ವ್ಯಾಪ್ತಿಯನ್ನು ಕಾಲಮಿತಿಯ ದೃಷ್ಟಿಯಿಂದಲೂ ಮತ್ತು ಪ್ರಾದೇಶಿಕ ದೃಷ್ಠಿಯಿಂದಲೂ ಸೀಮಿತಗೊಳಿಸಿಕೊಂಡು "ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳ ಪಾತ್ರ" ಎನ್ನುವ ವಿಷಯವನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ಕಲಬುರ್ಗಿ ಜಿಲ್ಲೆಯ ಐದು ಗಡಿಶಿಬಿರಗಳಾದ ಧುದನಿ, ಸಿಂದಗಿ, ಗೌಡಗಾಂವ, ಕೇಸರಜವಳಗಾ, ವಾಗ್ದರಗಿ ಶಿಬಿರಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ.

ಈ ಭಾಗದಲ್ಲಿ ನಡೆದ ಗಡಿಶಿಬಿರಗಳ ಹೋರಾಟದ ಸ್ಪಷ್ಟ ಚಿತ್ರಣ ಇರಲಿಲ್ಲ. ಅಲ್ಲಲ್ಲಿ ಲೇಖನಗಳು, ಪತ್ರಿಕೆಯ ವರದಿಗಳು ಬರುತ್ತಿದ್ದವು. ಪ್ರಮುಖವಾಗಿರುವಂತವರ ಹೆಸರುಗಳೇ ಲೇಖನಗಳಲ್ಲಿ ಅಳವಡಿಸಿಕೊಳ್ಳಲಾಗುತ್ತಿತ್ತು. ಮತ್ತು ಒಂದು ಅಥವಾ ಎರಡು ಶಿಬಿರಗಳ ಪರಿಚಯ ಮಾತ್ರ ಇರುತ್ತಿತ್ತು. ಇದನ್ನು ಗಮನಿಸಿಕೊಂಡು ನಾನು ಒಟ್ಟಾರೆ ಕಲಬುರ್ಗಿ ಜಿಲ್ಲೆಗೆ ಸಂಬಂಧಪಟ್ಟಂತಹ ಐದು ಶಿಬಿರಗಳು ಎಲ್ಲೆಲ್ಲಿ ಇದ್ದವು ಮತ್ತು ಅದರ ಶಿಬಿರಾಧಿಪತಿಗಳಾರು ಎನ್ನುವುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡು ಕಲಬುರ್ಗಿ ಜಿಲ್ಲೆಗೆ ಒಳಗೊಂಡಂತಿರುವ ಶಿಬಿರಗಳ ವ್ಯಾಪ್ತಿಯಲ್ಲಿಯೇ ಅಧ್ಯಯನ ಕೈಕೊಂಡಿದ್ದೇನೆ.

## ಅಧ್ಯಾಯ ೨

# ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟ ಮತ್ತು ರಜಾಕಾರರು

೨.೧ ಸ್ವಾತಂತ್ರ್ಯ ಹೋರಾಟ

೨.೨ ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸ್ಥಾಪನೆ

೨.೩ ಆರ್ಯ ಸಮಾಜ ಪಾತ್ರ

೨.೪ ಭಾಷಾ ದಬ್ಬಾಳಿಕೆ

೨.೫ ವಂದೇ ಮಾತರಂ ಚಳುವಳಿ

೨.೬ ಒಕ್ಕೂಟ ಚಳುವಳಿ

೨.೭ ರಜಾಕಾರರ ದೌರ್ಜನ್ಯಗಳು

೨.೮ ಪೊಲೀಸ್ ಕಾರ್ಯಾಚರಣೆ

ಭಾರತದ ಇತಿಹಾಸದಲ್ಲಿ ಹಲವಾರು ಕಾರಣಗಳಿಂದಾಗಿ ದಕ್ಷಿಣ ಭಾರತದ ಪ್ರಮುಖ ರಾಜವಂಶವಾದ ಹೈದರಾಬಾದ್ ನಿಜಾಂನ ಸಂಸ್ಥಾನವು ವಿಶಿಷ್ಟ ಛಾಪವನ್ನು ಮೂಡಿಸಿದೆ. ಅಂದು ಈ ಸಂಸ್ಥಾನದ ಜೊತೆ ಇದ್ದಂತಹ ನೂರಾರು ಸಣ್ಣ ಪುಟ್ಟ ದೇಶೀಯ ಸಂಸ್ಥಾನಗಳಲ್ಲಿ ಈಕ್ಕೇರಿ ಸಂಸ್ಥಾನ, ಬಿಜಾಪುರ ಆದಿಲ್ ಶಾಹಿ ಸಂಸ್ಥಾನ, ಮರಾಠವಾಡದ ಪೇಶ್ವರ ಹಾಗೇ ಮೈಸೂರಿನ ಸಂಸ್ಥಾನ ಇಂತಹ ದೇಶಿಯ ಸಂಸ್ಥಾನಗಳು ಆಂಗ್ಲರ ಪ್ರವೇಶದ ನಡುವೆಯು ದೇಶಿಯತೆಯ ಆಡಳಿತವನ್ನು ರೂಪಿಸಿಕೊಂಡು ಮುನ್ನಡೆದವು. ಭಾರತವನ್ನು ಪ್ರವೇಶಿಸಿದ ಬ್ರಿಟಿಷರು, ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳಲು ಅವರು ಕಂಡುಕೊಂಡ ಮಾರ್ಗವೆಂದರೆ ಈ ನೆಲದಲ್ಲಿ ಎಲ್ಲಾ ಜನಾಂಗದ ಸಂಸ್ಥಾನಗಳು ಒಮ್ಮತದಿಂದ ಆಳ್ವಿಕೆ ನಡೆಸುವುದನ್ನು ಮನಗಂಡು, ಅವುಗಳ ನಡುವೆ ಮನಸ್ತಾಪ ಏರ್ಪಡಿಸುವ "ಒಡೆದು ಆಳುವ ನೀತಿಯನ್ನು ಅನುಸರಿಸಿದರು." ಈ ಬ್ರಿಟಿಷರ ಒಡೆದು ಆಳುವ ನೀತಿಗೆ ಮೊದಲು ಬಲಿಯಾದದ್ದು ಬಂಗಾಳ(೧೯೦೫ ಬಂಗಾಳ ವಿಭಜನೆ)[೧] ನಂತರದ ಬಲಿಪಶುವೇ ಹೈದರಾಬಾದ್ ನಿಜಾಂ ಸಂಸ್ಥಾನ. ಇಂತಹ ಸಂಸ್ಥಾನವು ಬ್ರಿಟಿಷರ ಅಧೀನದಲ್ಲಿದ್ದು ಸ್ವತಂತ್ರವಾದ ಆಡಳಿತ ನಡೆಸುತ್ತಿತ್ತು. ಅಂಚೆ, ಆಕಾಶವಾಣಿ, ರೈಲ್ವೆ, ನಾಯ್ಯಾಲಯ, ಸೈನ್ಯ, ನಾಣ್ಯ,

ಶಿಕ್ಷಣ ಅಲ್ಲದೆ ಸಮೂಹ ಮಾಧ್ಯಮಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದವು. ನಿಜಾಂನು ತನ್ನದೇ ಆದ ನಾಣ್ಯ ಪದ್ಧತಿಯನ್ನು ರೂಢಿಸಿಕೊಂಡು ವಿದೇಶಿ ವ್ಯವಹಾರವನ್ನು ಪ್ರತ್ಯೇಕವಾಗಿ ಇಟ್ಟುಕೊಂಡಿದ್ದನು. ಬೇರೆ ಸಂಸ್ಥಾನಗಳು ತಮ್ಮ ಪ್ರಾಂತೀಯ ಭಾಷೆಗಳನ್ನು ತಮ್ಮ ಸಂಸ್ಥಾನದ ಆಡಳಿತದ ಭಾಷೆಯನ್ನಾಗಿ ಮಾಡಿಕೊಂಡಿದ್ದವು. ಆದರೆ ನಿಜಾಂನು ಉರ್ದು ಭಾಷೆಯನ್ನು ತನ್ನ ಆಡಳಿತ ಭಾಷೆಯನ್ನಾಗಿ ಮಾಡಿದನು. ಶಾಲಾ ಕಾಲೇಜುಗಳಲ್ಲಿ ಶಿಕ್ಷಣ, ಉರ್ದು ಭಾಷೆಯಲ್ಲಿ ಕಡ್ಡಾಯವಾಗಿದ್ದಲ್ಲದೇ ಹೈದರಾಬಾದ್ ಪ್ರಾಂತ್ಯದ ಮನೆ ಮಾತು ಸಹ ಉರ್ದುಮಯವಾಗುವಂತೆ ಬಲವಂತಹೇರಿದನು. ಶಾಲೆಗಳಲ್ಲಿ ಅಸಫ ಜಾಹಿ ವಂಶದ ಸ್ತುತಿಯಾದ

"ತಾಬದೇ ಖಾಲಿಕೇ ಆಲಂ ಯಹ ರಿಯಾಸತ್ ರಖೆ
ತುಜಕೋ ಉಸ್ಮಾ ಉಸದ್ ಇಜಲಾಲ ಸಲಾಮತ್ ರಖೇ
ಜೈಸೇ ತೂಫಕರೇ ಸಲಾತೀ ಹೈ ಉಫಜಲೇ ಯಜದಾ
ಯೂಂಹಿ ಮುಮತಾಜ್ ತೇರಾ ಪಾರೇ ಹುಕುಮತರಖೇ"

ಈ ಪ್ರಾರ್ಥನ ಗೀತೆಯೂ ಅರ್ಥ ನಿಜಾಮ ಉಸ್ಮಾಆಲಿಖಾನ್ ಬಹದ್ದೂರ್ ಮನೆತನ ಸೂರ್ಯಚಂದ್ರನಿರುವವರೆಗೆ ಬೆಳಗಬೇಕು ದೇವರು ನಿನಗೆ ಸಂಪತ್ತು ಹಾಗೂ ಸಂತೋಷ ಕೊಡಲಿ ಎಂಬರ್ಥದಲ್ಲಿ ಹಾಡಲು ಅಳವಡಿಸಲಾಗಿತ್ತು. ಇದು ಅನೇಕರಿಗೆ ಹಿಡಿಸಲಿಲ್ಲವಾದರೂ ಒಪ್ಪಿಕೊಳ್ಳುವುದು ಅನಿವಾರ್ಯವಾಗಿತ್ತು. ಉರ್ದುವಿನ ಪ್ರಾಬಲ್ಯದಿಂದಾಗಿ ಹೈದರಾಬಾದ್ ಪ್ರಾಂತ್ಯದ ಜನತೆಗೆ ಇಂಗ್ಲಿಷ್ ದೂರ ಉಳಿಯಿತ್ತು. ಇದರ ಪರಿಣಾಮ ಇಂಗ್ಲಿಷ್ ಭಾಷೆ ಇಂದಿಗೂ ಈ ಭಾಗದ ಜನತೆಗೆ ಕಬ್ಬಿಣದ ಕಡಲೆಯಾಗಿದೆ. ನಿಜಾಂನ ಈ ಸ್ವತಂತ್ರಧೋರಣೆಯಿಂದ ಅನೇಕ ಹೊಸ ವಿಚಾರಗಳು ಜನತೆಗೆ ತಲುಪದೆ ಮರೆಯಾಗಿ ಹೋದವು. ರಾಷ್ಟ್ರೀಯ, ಅಂತರ ರಾಷ್ಟ್ರೀಯ ಮಟ್ಟದ ಪ್ರಚಲಿತ ಘಟನೆಗಳು ಇವರಿಗೆ ತಲುಪದಾದವು.

ಹೈದರಾಬಾದ್ ನಿಜಾಂನ ಸ್ವತಂತ್ರ ದೋರಣೆಯನ್ನು ಸರ್ವಾಧಿಕಾರದ ನೀತಿಯನ್ನು ಖಂಡಿಸಲು ಈ ಭಾಗದಲ್ಲಿ ನಾಯಕರು ಹುಟ್ಟಿಕೊಂಡರು. ಅವರು ಜನತೆಗೆ ನಿಜಾಂನ ದಬ್ಬಾಳಿಕೆ ನೀತಿ, ಶೋಷಣೆ ಹಾಗೂ ನಿರಂಕುಶತ್ವದ ಅಪಾಯಗಳನ್ನು ತಿಳಿಸತೊಡಗಿದರು. ಸ್ವಾತಂತ್ರ್ಯದ ಕಲ್ಪನೆ ಮತ್ತು ಕನಸನ್ನು ಜನರಲ್ಲಿ ಹುಟ್ಟಿಸಿದರು. ಪರಿಣಾಮವಾಗಿ ಅನೇಕ ಜನ ನಿಜಾಂನ ವಿರುದ್ಧ ಹೋರಾಟಕ್ಕೆ ಮುಂದಾದರು. ೧೯೧೧ರಲ್ಲಿ ಹೈದರಾಬಾದ್ ಸಂಸ್ಥಾನದ ಏಳನೇ ದೊರೆ ಮೀರ್ -ಉಸ್ಮನ್ -ಅಲಿಖಾನ್ ಬಹಾದ್ದೂರ್‌ನು ಮತೀಯ ನಾಯಕನಾಗಿದ್ದರಿಂದ ಮುಸ್ಲಿಂಮೇತರ ಜನತೆಯ ಸಮಸ್ಯೆಗಳನ್ನು ಕಣ್ಣೆತ್ತಿಯೂ ನೋಡದಾದನು.

ಅವನು ಮುಸ್ಲಿಂ ಸಂಘಟನೆಯಾದ "ದಿನ್ ದಾರ ಸಿದ್ದಿಕೆ" ಸಂಸ್ಥೆ(೧೯೨೪) "ಮಜಲಿಸೆ ಇತ್ತೇಹಾದುಲ್ ಮುಸಿಲ್ಮಿ"(೧೯೨೬) ಮೊದಲಾದ ಧಾರ್ಮಿಕ ಸಂಸ್ಥೆಗಳಿಗೆ ಅನುಮತಿ ನೀಡಿಡಿದನು[೨] ಮುಸ್ಲಿಂ ಧರ್ಮ ಆಚರಣೆ, ಸಂಸ್ಕೃತಿಯ ಪೋಷಣೆ ಮತ್ತು ಉರ್ದು ಭಾಷೆಯ ಬೆಳವಣಿಗೆಯು ನಿಜಾಂ ಮೀರ್ -ಉಸ್ಮಾನ್ ಅಲಿಖಾನ್ ಬಹದ್ದೂರ್‌ನ ಮುಖ್ಯ ಉದ್ದೇಶವಾಗಿತ್ತು. ಈತನ ಪ್ರೇರಣೆ ಹಾಗೂ ಪ್ರೋತ್ಸಾಹದಿಂದಾಗಿ ಜನರನ್ನು ಮತಾಂತರ ಮಾಡುವ ಕ್ರಿಯೆಗೆ ಕೈಹಾಕಿದ ಮುಸ್ಲಿಂ ಸಂಘಸಂಸ್ಥೆಗಳಿಗೆ ನಿಜಾಂ ಆಶ್ರಯದಾತನಾದ. ನಿಜಾಂನು ಹೈದರಾಬಾದ್ ಪ್ರಾಂತ್ಯದ ಜನರಿಗೆ ಒಂದು ಹೇಳಿಕೆಯನ್ನು ನೀಡಿದ "ಮುಸ್ಲಿಂರು ಬೇರೆ ಜಾತಿಯವರಿಂದ ಭೂಮಿ ಖರೀದಿಸಬಹುದು. ಆದರೆ ಮುಸ್ಲಿಂರ ಭೂಮಿಯನ್ನು ಬೇರೆಯವರು ಒಡೆತನ ಮಾಡಬಾರದು. ಏಕೆಂದರೆ ಅದಕ್ಕೆ ಅವನೇ ಒಡೆಯ ಹಾಗೂ ಭೂಮಿ ಒತ್ತೆ ಹಾಕಿ ಸಾಲ ಪಡೆದುಕೊಂಡ ದಲಿತರು ಮುಸ್ಲಿಂರಾಗುವುದಾದರೆ ಅಂತವರಿಗೆ ಸಾಲದ ವಿಮುಕ್ತಿ ಇದೆ.[೪] ಈ ಹೇಳಿಕೆಯ ಉದ್ದೇಶ ಭಾರತದಲ್ಲಿಯೇ ಮುಸ್ಲಿಂ ಜನಸಂಖ್ಯೆಯನ್ನು ಹೆಚ್ಚಿಸಬೇಕೆಂಬ ಗುರಿ ನಿಜಾಂನ ಅನುಯಾಯಿಗಳದಾಗಿತ್ತು. ಹೀಗಾಗಿ ಮುಸ್ಲಿಂರಲ್ಲಿ ಸಾಲ ಪಡೆದ ದಲಿತರು, ಕೆಳವರ್ಗದವರು ಮತಾಂತರ ಹೊಂದತೊಡಗಿದರು.

ಮುಸ್ಲಿಂ ಜನತೆಯ ಧಾರ್ಮಿಕ ಕ್ರಿಯೆಗಳನ್ನು ಬಿಗಿಗೊಳಿಸುವುದರೊಂದಿಗೆ ಹಿಂದೂ ಧರ್ಮದ ಧಾರ್ಮಿಕ ವಿಧಿ-ವಿಧಾನಗಳಿಗೆ ನಿರ್ಬಂಧ ಹೇರ ತೊಡಗಿದನು. ಹಿಂದೂಗಳು ಯಾವುದೇ ಹಬ್ಬ ಹರಿದಿನ, ಜಾತ್ರೆ, ಉತ್ಸವ, ಮದುವೆ, ಮುಂಜಿ ಮೊದಲಾದ ಕ್ರಿಯೆಗಳ ಆಚರಣೆಗೆ ನಿಜಾಂನ ಅನುಮತಿ ಪಡೆಯಬೇಕಾಗಿತ್ತು. ಸರಕಾರಿ ಹುದ್ದೆಗಳಲ್ಲಿ ಉನ್ನತ ಹುದ್ದೆಗಳನ್ನು ಹೊಂದುವುದು ಮುಸ್ಲಿಂ ಧರ್ಮಬಾಹಿರವೆಂದು ಹಿಂದೂಗಳನ್ನು ಆಡಳಿತದಿಂದ ದೂರ ಇಟ್ಟಿದ್ದನು. "ತನ್ನ ನೀತಿಗನು ಗುಣವಾಗಿ ನಿಜಾಂನು ಅನುಸರಿಸಿದ ನಾಗರಿಕ ಸೇವ ಪಟ್ಟಿಯನ್ನು ಡಾ.ಬಿ.ಸಿ.ಮಹಾಬಲೇಶ್ವರಪ್ಪನವರು ಗುರುತಿಸುವಂತೆ ಈ ರೀತಿ ಮುಂದಿನ ಕೋಷ್ಟಕದಲ್ಲಿ ನೋಡಬಹುದು.[೫]

ಇದರಿಂದ ಬೇಸತ್ತ ಜನತೆ ನಿಜಾಂನ ವಿರುದ್ಧ ಸಿಡಿದೇಳತೊಡಗಿದರು. ನಿಜಾಂನ ಆಡಳಿತವು ಗ್ರಾಮ ಮಟ್ಟದಿಂದ ನಡೆಯತೊಡಗಿತು. ಅಂದರೆ ಜಹಗೀರುದಾರ, ದೇಶಮುಖ, ಕುಲಕರ್ಣಿ ಹಾಗೂ ಶಾನಭೋಗರ ಮೂಲಕ ನಡೆಯುತ್ತಿತ್ತು. ಹೀಗಾಗಿ ಸ್ಥಳೀಯ ಅಧಿಕಾರಿಗಳು ನಿಜಾಂನ ಅಧೀನದಲ್ಲಿದ್ದುದರಿಂದ ಜನತೆಯ ಸಿಟ್ಟು ಅವರ ದವಡೆಗೆ ಮೂಲವಾಗಿತ್ತು. ಮತಾಂತರವನ್ನು ತಡೆಯಲು ಹೋರಾಟ ನಡೆಸಲು ಅನೇಕ ಸಂಘ, ಸಂಸ್ಥೆಗಳು ಹೈದರಾಬಾದ್ ಪ್ರಾಂತ್ಯದಲ್ಲಿ ಹುಟ್ಟಿಕೊಂಡವು. ಈ ಸಂಸ್ಥೆಗಳು ನಿಜಾಂ ಹಾಗೂ ಬ್ರಿಟಿಷ್ ರ ವಿರುದ್ಧ ಹೋರಾಡುವ ಯುವಕರಿಗೆ ಸ್ಫೂರ್ತಿದಾಯಕವಾಗಿ ಕೆಲಸ ಮಾಡತೊಡಗಿದವು ಎಂದು ಇತಿಹಾಸಕಾರರ ಅಭಿಪ್ರಾಯವಾಗಿದೆ.

| ಕ್ರ. ಸಂ. | ಇಲಾಖೆಗಳು | ಮುಸ್ಲಿಂ ಜನಸಂಖ್ಯೆಯಲ್ಲಿ ಶೇ ೧೨ರಷ್ಟು | ಹಿಂದೂಗಳು ಜನಸಂಖ್ಯೆಯಲ್ಲಿ ಶೇ ೮೬ರಷ್ಟು | ಯುರೋಪಿಯನ್ನರು ಜನಸಂಖ್ಯೆಯಲ್ಲಿ ಶೇ ೧ರಷ್ಟು | ಪಾರಸಿಗಳು ಜನಸಂಖ್ಯೆಯಲ್ಲಿ ಶೇ ೦.೫ರಷ್ಟು | ಸಿಖ್‌ರು ಜನಸಂಖ್ಯೆಯಲ್ಲಿ ಶೇ ೦.೫ರಷ್ಟು |
|---|---|---|---|---|---|---|
| ೧. | ನಿಜಾಮನ ಸೆಕ್ರಟೇರಿಯಲ್ | ೧ | ೧ | ೧ | - | - |
| ೨. | ಹಣಕಾಸು | ೭೦ | ೧೦ | - | ೧ | - |
| ೩. | ಕಂದಾಯ | ೧೮೯ | ೩೨ | ೩ | ೩ | ೧ |
| ೪. | ಅಬ್ಕಾರಿ | ೨೩ | ೨ | - | - | - |
| ೫. | ನ್ಯಾಯಾಂಗ | ೧೨೮ | ೩೬ | - | ೧ | - |
| ೬. | ಪೋಲೀಸ | ೬೪ | ೮ | - | - | - |
| ೭. | ಶಿಕ್ಷಣ | ೨೪೩ | ೭೬ | ೨೩ | ೨ | - |
| ೮. | ನೊಂದಾವಣಿ | ೫ | - | - | - | - |

*ಕೃಪೆ : ಡಾ.ಬಿ.ಸಿ.ಮಹಾಬಲೇಶ್ವರಪ್ಪ, ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು*

## ೨.೧. ಸ್ವಾತಂತ್ರ್ಯ ಹೋರಾಟ

ಭಾರತ ದೇಶದ ತುಂಬೆಲ್ಲ ಗಾಂಧೀಜಿಯವರ ನಾಯಕತ್ವದಲ್ಲಿ ಬ್ರಿಟಿಷರ ಆಳ್ವಿಕೆಯ ವಿರುದ್ಧ ಹೋರಾಟದ ವಿವಿಧ ಚಳುವಳಿಗಳು ಆರಂಭಾವಾಗಿದ್ದವು. ಚಳುವಳಿಯ ಕಾವು ಏರಿದಂತೆಲ್ಲ ಹೈದರಾಬಾದ್ ಪ್ರಾಂತ್ಯದ ಜನರಲ್ಲಿ ರಾಷ್ಟ್ರೀಯತೆಯ ಭಾವನೆ ಉಜ್ವಲವಾಗುತ್ತಿತ್ತು. ಗಾಂಧೀಜಿಯ ಹಿಂಬಾಲಕರ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿತು. ದೇಶದಲ್ಲೆಲ್ಲ ಸಂಚಾರ ಮಾಡಿ ಜನತೆಯನ್ನು ಹುರಿದುಂಬಿಸುತ್ತಿದ್ದರು. ಸ್ವಾತಂತ್ರ್ಯ ಹೋರಾಟಗಾರರು ಬ್ರಿಟಿಷರ ಕಣ್ಣು ತಪ್ಪಿಸಿ ಮಾರು ವೇಷದಲ್ಲಿ ಸುತ್ತಾಡುತ್ತಿದ್ದರು. ಗಾಂಧೀಜಿ ಆಯೋಜಿಸಿದ ೧೯೧೯ರ ಅಸಹಕಾರ ಚಳುವಳಿ, ಸ್ವದೇಶಿ ಚಳುವಳಿ, ಕರನಿರಾಕರಣೆ, ದಂಡಿಯಾತ್ರೆ, ಕ್ವಿಟ್ ಇಂಡಿಯ ಚಳುವಳಿಗಳು ದೇಶದಾದ್ಯಾಂತ ನಡೆದವು. ಈ ಚಳವಳಿಗಾಗಿ ಅವರು ಕಂಡುಕೊಂಡ ಪ್ರಮುಖ ಮಾರ್ಗವೆಂದರೆ ಅಹಿಂಸಾ ಮಾರ್ಗ. ಅವರು 'ಸತ್ಯಾಗ್ರಹ' ಮಂತ್ರವನ್ನು ಬಳಸಿಕೊಂಡರು. ೧೮೫೭ರ ಮಹಾದಂಗೆಗಳು, ಗಾಂಧಿ (ಲಾಲಾಬಾಹದ್ದೂರ ಶಾಸ್ತ್ರಿ) ಲಾಲ್, ಪಾಲ್, ಬಾಲ್, ಸರದಾರ್ ವಲ್ಲಭಭಾಯಿ ಪಟೇಲ್, ಸುಭಾಸಚಂದ್ರಬೋಸ್, ಮುಂತಾದ ನಾಯಕರುಗಳ ಸಾಹಸ, ಧೈರ್ಯ ಹಾಗೂ ಬುದ್ಧಿವಂತಿಕೆಯು ಹೈದರಾಬಾದ್ ಪ್ರಾಂತ್ಯದ ಜನರ ಮೇಲೆ ತೀವ್ರವಾದ ಪರಿಣಾಮವನ್ನು ಬೀರಿದವು. ಬ್ರಿಟಿಷರು ಚಳುವಳಿಗಾರರನ್ನು ಹಾಗೂ

ಸತ್ಯಾಗ್ರಹಗಳನ್ನು ನೋಡಿ ಕೆಲವು ಸುಧಾರಣೆಗಳನ್ನು ಆಡಳಿತದಲ್ಲಿ ತಂದರು. ಭಾರತೀಯರನ್ನು ಆಡಳಿತದಲ್ಲಿ ಸೇರಿಸಿಕೊಂಡರು "ಮಾಂಟೋ ಜೇಮ್ಸ್ ಫ್ಲೇಪ್ " ಸುಧಾರಣೆಗಳು ೧೯೧೯ರಲ್ಲಿ ಜಾರಿಗೆ ಬಂದವು. ಈ ಸುಧಾರಣೆಯ ಫಲವನ್ನು ಇಡೀ ಭಾರತದ ಜನತೆ ಅನುಭವಿಸಿತು. ಆದರೆ ಹೈದರಾಬಾದ್ ಪ್ರಜೆಗಳು ಮಾತ್ರ ವಂಚಿತರಾದರು. ಒಂದೆಡೆ ಸ್ವಾತಂತ್ರ್ಯದ ಹೋರಾಟ ಇನ್ನೊಂದೆಡೆ ನಿಜಾಂನ ದರ್ಪಿಷ್ಟ ಆಡಳಿತದ ವಿರುದ್ಧ ಹೋರಾಡುವುದು ಈ ಭಾಗದ ಜನತೆಯ ಸಾಮಾನ್ಯ ಸಂಗತಿಯಾಗಿತ್ತು.[೬] ಸ್ವಾತಂತ್ರ್ಯ ಪ್ರಜ್ಞೆ ಹೆಚ್ಚು ಹೆಚ್ಚಾಗಿ ಜನತೆಯಲ್ಲಿ ಬೆಳೆಯತೊಡಗಿತು. ನಿಜಾಂನು ತನ್ನ ಆಡಳಿತದಲ್ಲಿ ಜನತೆಗೂ ಪ್ರಾತಿನಿಧ್ಯ ನೀಡಬೇಕು ಅಥವಾ ಜನರ ಪ್ರತಿನಿಧಿಗಳನ್ನಾದರೂ ಭಾಗವಹಿಸುವಂತೆ ಮಾಡಬೇಕು ಎಂದು ಕೇಳತೊಡಗಿದರು. ಈ ಒತ್ತಡಕ್ಕೆ ಮಣಿದ ನಿಜಾಂನು ೧೯೨೧ರಲ್ಲಿ ಸರ್.ಅಲೀ ಇಮಾಂರಾಯಬಲ್ ಮುಕುಂದರ್ ಒಳಗೊಂಡ ಒಂದು ಸಮಿತಿ ರಚಿಸಿದ. ಈ ಸಮಿತಿ ಶಾಸನ ಸಭೆಗೆ ಬೇಕಾದ ಮಾಹಿತಿಯನ್ನು ಒಪ್ಪಿಸಿತು. ಆದರೆ ಈ ವರದಿಯನ್ನು ನಿಜಾಂನು ಕಸದ ಬುಟ್ಟಿಗೆ ಹಾಕಿದನೆ ಹೊರತು ಜಾರಿಗೆ ತರಲಿಲ್ಲ. ಆದಕಾರಣವಾಗಿ ಜನರು "ಸ್ಟೇಟ್ ರಿಫಾರ್ಮ್ಸ್ ಕಮಿಟಿ"ಯನ್ನು ಅಸ್ತಿತ್ವಕ್ಕೆ ತಂದು ಸಮಾವೇಶ ನಡೆಸಬೇಕೆಂದು ನಿಜಾಂನಿಗೆ ಕೇಳತೊಡಗಿದರು. ಆದರೆ ನಿಜಾಂ ಈ ಸಮಾವೇಶ ನಡೆಯದಂತೆ ನಿರ್ಬಂಧ ಹೇರಿದ. ಪರಿಣಾಮವಾಗಿ ೧೯೨೨ರಲ್ಲಿ ಕಲಬುರ್ಗಿಯ ತುಂಬಾ ಅನೇಕ ಹಿಂಸಾರೂಪಿ ದಂಗೆಗಳು ನಡೆಯತೊಡಗಿದವು. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಜನರನ್ನು ಬಂಧಿಸುವ ಕೆಲಸವನ್ನು ನಿಜಾಂ ಪೊಲೀಸರು ಮಾಡುತ್ತಿದ್ದರು. ಈ ನಡುವೆ ರಜಾಕಾರರು ಲೂಟಿ, ಕೊಲೆ, ಸುಲಿಗೆ ಮಾಡಲಾರಂಭಿಸಿದರು.

ಬಡತನದಲ್ಲಿಯೇ ಜೀವನ ಸಾಗಿಸುತ್ತಿದ್ದಂತಹ ಜನರನ್ನು ಉದ್ಧಾರ ಮಾಡುತ್ತೇನೆಂದು ಸಾಲ ನೀಡಿ ನಂತರ ಬಡ್ಡಿ ಚಕ್ರಬಡ್ಡಿ ಸಾಲದಲ್ಲಿ ಸಿಲುಕಿಸಿ ಜಮೀನ್ದಾರರು, ಶ್ರೀಮಂತರು ಹಾಗೂ ಜಹಾಗೀರದಾರರು, ಹೈದರಬಾದ ಜನತೆಯ, ಭೂಮಿಯನ್ನು ಕಬಳಿಸ ತೊಡಗಿದರು. ಜನತೆಯ ಆರ್ತನಾದವನ್ನು ಕೇಳುವವರು ಇರಲಿಲ್ಲ. ನಿಜಾಂನೇ ಅವರಿಗೆ ನೇರ ಸಹಾಯಮಾಡಿ ಹೈದರಾಬಾದ್ ಪ್ರಾಂತ್ಯದ ಜನರ ಬದುಕನ್ನು ನರಕಮಯ ಮಾಡಿದನು. ಜನತೆಯ ಅಳಲನ್ನು ಕೇಳುವ ಪ್ರಜಾ ಪ್ರತಿನಿಧಿ ಸಭೆಯಾಗಲಿ, ಪ್ರತಿನಿಧಿಗಳಾಗಲಿ ಇರಲಿಲ್ಲವಾದ್ದರಿಂದ ಜನತೆಯ ಕೂಗು ಅರಣ್ಯರೋಧನ ವಾಗಿತ್ತು. ನಿಜಾಂ ಸರ್ವಾಧಿಕಾರಿಯಾಗಿದ್ದ. ಅವನ ಅಧಿಕಾರಿಗಳು ಕಲಬುರ್ಗಿ ಭಾಗಗಳಲ್ಲಿ ಅತಿಯಾದ ದೌರ್ಜನ್ಯ ಹಾಗೂ ಮಹಿಳೆಯರಿಗೆ ಮಾನಸಿಕ ಹಿಂಸೆ ನೀಡಿ ಅತ್ಯಾಚಾರ ಮಾಡಿದರು. ಅಧಿಕಾರಿಗಳು ಜನರ ರಕ್ಷಕರಾಗುವ ಬದಲು ಭಕ್ಷಕರಾಗಿದ್ದರು. ಆದರೂ ಈ ಭಾಗದ ಜನತೆ ರಾಷ್ಟ್ರೀಯ ಹಾಗೂ ಸಾಮಾಜಿಕ ಭದ್ರತೆಯ ಸುಧಾರಣೆ ಸಮಿತಿಯೊಂದನ್ನು ರಚಿಸಿಕೊಂಡು ಸ್ವಾತಂತ್ರ್ಯ ಹೋರಾಟ

ನಡೆಸಿದರು. ವಿಮೋಚನೆಗಾಗಿ ಸಂಘಟಿತರಾಗ ತೊಡಗಿದಂತಹ ಹೈದರಾಬಾದ್ ಭಾಗಗಳ ಜನತೆಯನ್ನು ಹತ್ತಿಕ್ಕಲು ನಿಜಾಂನು ಬ್ರಿಟಿಷರ ಸಹಾಯದೊಂದಿಗೆ "ಗಸ್ತಿ ನಂಬರ್ ೫೩" ಎಂಬ ಶಾಸನವನ್ನು ಸ್ಥಳೀಯ ಜಾರಿಗೆ ತಂದನು.[೭] ಯಾವುದೇ ಸಭೆ ಸಮಾರಂಭಗಳನ್ನು ನಡೆಸಬೇಕಾದರೆ, ಧಾರ್ಮಿಕ ಆಚರಣೆ ಜರುಗುವುದಿದ್ದರೆ, ಗುಂಪು ಚಟುವಟಿಕೆ ನಡೆಸುವಂತ ಕಾರ್ಯ ಕ್ರಮಗಳಿದ್ದರೇ ನಿಜಾಂನ ಅನುಮತಿ ಪಡೆಯಬೇಕು ಎಂದು ಆಜ್ಞೆ ಹೊರಡಿಸಿದ. ಜನರ ಸ್ವಾತಂತ್ರ್ಯ ಹರಣದ ಈ ಕ್ರೂರ ನಿಯಮ ಈ `ಗಸ್ತಿ ನಂಬರ್ ೫೩"ರಲ್ಲಿತ್ತು. ನಿಜಾಂ ಸರಕಾರದ ಅನುಮತಿಯೊಂದಿಗೆ ನಡೆಸದಿದ್ದರೆ ಅಂತಹವರನ್ನು ಪೊಲೀಸರು ತಕ್ಷಣವೇ ಬಂಧಿಸುತ್ತಿದ್ದರು. ಇಂತಹ ಕ್ರೂರ ಶಾಸನಗಳ ವಿರುದ್ಧ ಜನತೆ ಪ್ರಜ್ಞೆ ಬೆಳೆಸಿಕೊಂಡು ಸರಕಾರದ ವಿರುದ್ಧ ಹೋರಾಟಕ್ಕೆ ನಿಂತರು.

ನಿಜಾಂನು ಹೇರಿದ 'ಗಸ್ತಿ ನಂಬರ್ ೫೩" ನಿಯಮದಿಂದ ನಾಗರಿಕ ಹಕ್ಕುಗಳ ಉಲ್ಲಂಘನೆಯಾಗ ತೊಡಗಿತು. ಇದರ ವಿರುದ್ಧ ಅನೇಕ ಮುಖಂಡರು ಹಕ್ಕುಗಳ ರಕ್ಷಣೆಗಾಗಿ ಸಂಘಟನಾತ್ಮಕ ಚಟುವಟಿಕೆಗಳನ್ನು ಹಮ್ಮಿಕೊಂಡರು. ಸಾರ್ವಜನಿಕ ಸಭೆ, ಸಮಾರಂಭಗಳ ಮೇಲೆ ನಿಷೇಧ ಹೇರಿದ್ದರಿಂದ ಮನೆ, ವ್ಯಾಯಮಶಾಲೆ, ಗ್ರಂಥಾಲಯಗಳಲ್ಲಿ ಗುಪ್ತ ಸಭೆಗಳು ನಡೆಯತೊಡಗಿದವು. ಪಂಡಿತ್ ತಾರಾನಾಥರು ಬರೆದ 'ಇಂಡಿಯನ್ ಡಯ್ಯರ್ ' ಲೇಖನ ಮತ್ತು ಶೋಯಿಬುಲ್ಲಾಖಾನ್ ರ 'ಇಮ್ರೋಜ್ ' ಉರ್ದು ಪತ್ರಿಕೆಯ ಸಂಪಾದಕರು ಬರೆದ "ಸ್ವಾತಂತ್ರ್ಯದ ಪರಿಕಲ್ಪನೆ" ಮುಂತಾದ ಲೇಖನಗಳು ಸ್ವಾತಂತ್ರ್ಯದ ಕಲ್ಪನೆಗಳನ್ನು ಜನರಲ್ಲಿ ಬಿತ್ತತೊಡಗಿದವು. ಅಲ್ಲದೆ ರಾಷ್ಟ್ರ ನಾಯಕರಿಗೆ ಈ ಭಾಗದ ಜನತೆಯ ಚಿಂತನೆ ಹೇಗಿದೆ ಎಂಬುದನ್ನು ಹೇಳಿದವು. ಇದೇ ಸಂದರ್ಭದಲ್ಲಿ ಗಾಂಧೀಜಿಯವರು ಬೊಂಬಾಯಿಗೆ ಹೋಗುವ ಮಾರ್ಗದಲ್ಲಿ ಕಲಬುರ್ಗಿಗೆ ಬಂದು ಜನತೆಗೆ ಭೇಟಿ ನೀಡಿ ಜನರ ದುಃಖ ದುಮ್ಮಾನುಗಳನ್ನು ತಿಳಿದುಕೊಂಡರು. ಗಾಂಧೀಜಿಯವರು ಕಲಬುರ್ಗಿ ಜನರಿಗೆ ಧೈರ್ಯಹೇಳಿ, ಜನರ ವೇದನೆಗೆ ಸ್ಪಂದಿಸಿದರು. ಗಾಂಧೀಜಿಯವರ ಪ್ರೇರಣೆಯಿಂದ ಹಾಗೂ ೧೯೨೦ರ ಸುಮಾರಿನಲ್ಲಿ ನಡೆದ "ವಂದೇ ಮಾತರಂ" ಚಳುವಳಿಯಿಂದ ಹೈದರಬಾದ ಭಾಗಕ್ಕೂ ಸಹ ಸ್ವಾತಂತ್ರ್ಯ ಚಳುವಳಿಯ ಬಿಸಿ ತಾಗಿತ್ತು. ಹೈದರಾಬಾದ್ ವಿವೇಕ ವರ್ಧನಿ ಶಾಲೆಯಲ್ಲಿ ನಡೆದ ಬಹಿರಂಗ ಸಭೆಯು ನಿಜಾಂನ ಸರ್ವಾಧಿಕಾರ ವಿರುದ್ಧ ಹೋರಾಟಕ್ಕೆ ನಾಂದಿ ಹಾಡಿತು ಎಂದು ರಮಾನಂದತೀರ್ಥರು ಹೇಳುತ್ತಾರೆ. ಅದೇ ರೀತಿ ಖಿಲಾಫತ್ ಸಂಘಟನೆಯು ಸಹ ಬೃಹತ್ ಸಮಾರಂಭವನ್ನು ಏರ್ಪಡಿಸಿ ನಿಜಾಂನ ಸರಕಾರಕ್ಕೆ ಧಿಕ್ಕಾರ ಹಾಕಿತು.

"ಹೈದರಾಬಾದ್ ರಾಜಕೀಯ ಪರಿಷತ್ " ೧೯೨೩ರಲ್ಲಿ ಸ್ಥಾಪನೆಗೊಂಡಿತು. ಕಾಕಿನಾಡ, ಮುಂಬೈ, ಪುಣೆ ಮೊದಲಾದ ಸ್ಥಳಗಳಲ್ಲಿ ನಿಜಾಮನ ಆಡಳಿತದ ವಿರುದ್ಧ ಸಭೆ, ಹರತಾಳಗಳು ಆರಂಭವಾದವು.

ಇಂತಹ ಸಭೆಗಳಿಗೆ ಸರೋಜನಿನಾಯ್ಡು, ಚಿತ್ತರಂಜನ್ ದಾಸ್, ಸರ್ದರ್ ವಲ್ಲಭಭಾಯಿ ಪಟೇಲ್, ಮತ್ತು ಸುಭಾಸಚಂದ್ರಬೋಸ್, ಮೊದಲಾದ ಹಿರಿಯ ನಾಯಕರು ಆಗಮಿಸಿ ನಿಜಾಮನ ಆಡಳಿತ ನೀತಿಯನ್ನು ಖಂಡಿಸಿದರು."[೮] ಮುಗ್ಧರಾಗಿ ಆ ನೀತಿಗಳನ್ನು ಒಪ್ಪಿಕೊಂಡು ಆಳಿಸಿಕೊಳ್ಳುತ್ತಿದ್ದ ಜನತೆಯನ್ನು ಬಡಿದೆಬ್ಬಿಸಿದರು. ನಿಜಾಂನ ಅಮಾನವೀಯ ನೀತಿಗಳ ವಿರುದ್ಧ ಪ್ರತಿಭಟಿಸಬೇಕೆಂಬ ಕೆಚ್ಚನ್ನು ಜನರಲ್ಲಿ ತುಂಬಿದರು. ಹೈದರಾಬಾದ್ ಕರ್ನಾಟಕದ ಪ್ರಜ್ಞಾವಂತ ಸಾಹಸಿಗಳಾದ ಡಿ.ಜಿ.ಬಿಂದು, ಎಚ್. ಸಿ.ಹೀಡಾ ಜನಾರ್ಧನರಾವ್ ದೇಸಾಯಿ, ಜಿ.ಕೆ.ಪ್ರಾಣೇಶಾಚಾರ್ಯ, ಪಿ.ಕಿಷನ್‌ರಾವ್ ಮುಂತಾದವರು ಸೇರಿ ನಿಜಾಂ ಕರ್ನಾಟಕ ಪರಿಷತ್ ಎಂಬ ಸಂಸ್ಥೆ ಆರಂಭಿಸಿದರು. ಬೀದರ್, ರಾಯಚೂರ್, ಹೈದರಾಬಾದ್, ಕಲಬುರ್ಗಿ, ಸುರಪುರ, ಯಾದಗಿರಿಗಳಲ್ಲಿ ಸಮ್ಮೇಳನ ನಡೆಸಿದರು. ಈ ಕಾರ್ಯಕ್ರಮಗಳ ಮೂಲಕ ಜನರಲ್ಲಿ ರಾಷ್ಟ್ರದ ಪ್ರಜ್ಞೆ ಮೂಡಿಸತೊಡಗಿದರು. ಜನಾರ್ಧನರಾವ್ ದೇಸಾಯಿ, ಹಣಮಂತರಾವ್ ಕಕ್ಕೇರಿ ಹಾಗೂ ಅಣ್ಣಾರಾವ್ ಗಣಮುಖಿಯವರು ಸಮ್ಮೇಳನಗಳ ಅಧ್ಯಕ್ಷತೆ ವಹಿಸಿ ಜನತೆಗೆ ನಿಜಾಂನ ವಿರುದ್ಧ ಹೋರಾಡುವ ನೈತಿಕ ಸ್ಥೈರ್ಯ ತುಂಬಿದರು.

ಹರ್ಡೇಕರ್ ಮಂಜಪ್ಪನವರು ಕಲಬುರ್ಗಿ ಜಿಲ್ಲೆಯಾದ್ಯಂತ ಸಂಚರಿಸಿ ಖಾದಿಧರಿಸುವುದು, ಪಾನನಿರೋಧ, ವಿದೇಶಿ ವಸ್ತ್ರಗಳನ್ನು ತ್ಯಜಿಸುವುದು ಮುಂತಾದ ಕಾರ್ಯಕ್ರಮಗಳನ್ನು ನಡೆಸಿ ಜನರಲ್ಲಿ ಜಾಗೃತಿ ಮೂಡಿಸಿದರು. ಸ್ವಾತಂತ್ರ್ಯ ಹೋರಾಟ ಹಾಗೂ ವಿಮೋಚನಾ ಹೋರಾಟಗಾರರಾದ ದತ್ತಾತ್ರೇಯ ಅವರಾದಿ, ವ್ಹಿ.ಪಿ.ದೇವುಳಗಾಂವಕರ್, ಕೋಳೂರು ಮಲ್ಲಪ್ಪ, ನಾರಾಯಣರಾವ್ ಕಾನಿಹಾಳ, ಸರದಾರ ಶರಣಗೌಡ ಪಾಟೀಲ, ಕಕ್ಕೇರಿ ಹನುಮಂತರಾವ್, ಜಗನ್ನಾಥರಾವ್ ಚಂಡ್ರಿಕಿ, ಅಣ್ಣಾರಾವ್ ವೀರಭದ್ರಪ್ಪ ಪಾಟೀಲ್, ಉಮಾಜಿ ಹಕೀಕತರಾವ್ ಮುಂತಾದವರು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಭಾರತ ದೇಶ ಹೇಗೆ ಸ್ವತಂತ್ರಗೊಂಡಿತೋ ಹಾಗೆಯೇ ಹೈದರಾಬಾದ್ ಕರ್ನಾಟಕ ಭಾಗವು ಕೂಡ ಸ್ವಾತಂತ್ರ್ಯ ಪಡೆಯಬೇಕೆಂಬ ಬಯಕೆಹೊಂದಿ ಹೋರಾಟಕ್ಕಿಳಿದ.

## ೨.೨. ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸ್ಥಾಪನೆ

ಭಾರತದ ಅನೇಕ ಭಾಗಗಳಲ್ಲಿ ಸಂಸ್ಥಾಕಾಂಗ್ರೆಸ್ ಸಂಘಟನೆಗಳು ೧೯೨೮ರಲ್ಲಿ ಹುಟ್ಟಿಕೊಂಡವು. ಕಾಂಗ್ರೆಸ್ಸಿಗರ ಅನೇಕ ಸುಧಾರಣಾನೀತಿಯ ವಿಚಾರಗಳು ಜನತೆಗೆ ಸಂತೋಷ ಉಂಟುಮಾಡಿದವು. ಸ್ವರಾಜ್ಯ ಪ್ರಾಪ್ತಿಯ ಭಾಗವಾಗಿ ನಿರ್ಮಿಸಿದ ಈ ಜನತಾ ಸರಕಾರಗಳು ಜನರ ಆಶೆ ಆಕಾಂಕ್ಷೆಗಳಿಗೆ ಸ್ಪಂದಿಸುತ್ತ ತನ್ನ ಕಾರ್ಯ ನಡೆಸಿತು. ಇದರಿಂದ ಹೈದರಾಬಾದ್ ಪ್ರಾಂತ್ಯದ ಜನತೆ ರಾಜಕೀಯ ಹಾಗೂ ರಾಷ್ಟ್ರೀಯ ಬೆಳವಣಿಗೆ ಕಂಡು ಕೊಂಡಿತು. ಸರ್ 'ಇಮಾಮ್' ಅಲಿಯು ೧೯೨೧ರಲ್ಲಿ ಹೈದರಾಬಾದ್ ರಾಜ್ಯದ ಪ್ರಧಾನ ಮಂತ್ರಿಯಾಗಿದ್ದ. ಆಗ ಆಡಳಿತ ಸುಧಾರಣೆಗಳನ್ನು ತರಲು

ಆಯೋಗವನ್ನು ರಚಿಸಲಾಗಿತ್ತು. ಹೈದರಾಬಾದ್ ಪ್ರಾಂತ್ಯದ ಜನತೆಯು ಕುಂದು ಕೊರತೆಗಳನ್ನು ಗಮನಿಸಲು ಈ ಆಯೋಗವನ್ನು ನೇಮಿಸಿತ್ತು. ಇದಾದ ನಂತರ "ಹೈದರಾಬಾದ್ ರಿಫಾರ್ಮ್ಸ್ ಕಮಿಟಿ" ಹಾಗೂ ಹೈದರಾಬಾದ್ ಪೀಪಲ್ಸ್ ಲೀಗ್ ೧೯೩೭ರಲ್ಲಿ ರಚಿತಗೊಂಡವು."[೯] ಇದರ ಮುಖ್ಯ ಉದ್ದೇಶ ಜನತೆಗೆ ಪ್ರಾತಿನಿಧ್ಯ ಕೊಡಬೇಕೆಂದು ಚರ್ಚೆನಡೆಸುವುದು ಹಾಗೂ ಪಡೆಯುವುದಾಗಿತ್ತು.

"ಹೈದರಾಬಾದ್ ಸ್ಟೇಟ್ ಕ್ರಾಂಗ್ರೆಸ್ಸನ್ನು ೧೯೩೮ರಲ್ಲಿ ಸ್ಥಾಪಿಸಲು ನಿರ್ಧರಿಸಲಾಯಿತು. ಈ ಸಭೆಯ ಸಂಯೋಜಕರಾಗಿ ರಾಮಕೃಷ್ಣದೂತೆ ಹೈದರಾಬಾದ್ ಕಾಂಗ್ರೆಸ್ಸ್ ನ ಗುರಿಗಳನ್ನು ಜನತೆಗೆ ವಿವರಿಸಿದರು. ಜಿ.ರಾಮಾಚಾರ್, ಮಾಟಪಾಡಿ ಹಣಮಂತರಾವ್, ಸೈಯದ್ ಸಿರಾಜುಲ್ ಹಸನ್ ತಿರ್ಮಿಜ, ಪಾಂಡುರಂಗರಾವ ಜೋಷಿ ಮುಂತಾದವರು ಈ ಸ್ಥಾಯಿ ಸಮಿತಿಯ ಸದಸ್ಯರಾದರು. ನಂತರ ಗೋವಿಂದರಾವ್ ನಾನಲ್, ರವಿನಾರಾಯಣರೆಡ್ಡಿ, ಹರಿಶ್ಚಂದ್ರ ಹೇಡಾ, ಜನಾರ್ದನರಾವ್ ದೇಸಾಯಿ ಮುಂತಾದವರು ಸೇರಿಕೊಂಡರು. ೧೯೩೮ರಲ್ಲಿ ಸರ್ವ ಸದಸ್ಯರ ಸಭೆ ಸೇರಿ ಕಾರ್ಯಕಾರಿ ಮಂಡಳಿ ರಚಿಸಲಾಯಿತು. ಹೈದರಾಬಾದ್ ರಾಜ್ಯ ಕಾಂಗ್ರೆಸ್ ಮುಂಖಡರು ಸೇರಿ ಇದನ್ನು "ಜಾತ್ಯಾತೀತ" ಪಕ್ಷವನ್ನಾಗಿ ಮಾಡಬೇಕೆಂದು ಪ್ರಯತ್ನಿಸಿದರು.[೧೦] ಈ ಪ್ರಯತ್ನದ ಹಿಂದಿರುವ ಉದ್ದೇಶವಿಷ್ಟೆ. ನಿಜಾಮನಿಗೆ ಯಾವ ಪಕ್ಷವೂ ಬೆಂಬಲ ಕೊಡಬಾರದೆಂದು.

ಹೈರರಾಬಾದ ಸ್ಟೇಟ್ ಕಾಂಗ್ರೆಸ್‌ನ ಮುಂಖಡತ್ವ ವಹಿಸಿದ ಸ್ವಾಮಿ ರಮಾನಂದ ತೀರ್ಥರ ಅಧ್ಯಕ್ಷತೆಯಲ್ಲಿ ಶ್ರೀನಿವಾಸರಾವ್ ಬೋರಿಕರ್, ಜನಾರ್ಧನರಾವ್ ದೇಸಾಯಿ, ಮುಂತಾದವರು ನಿಜಾಂನ ವಿರುದ್ಧ ಸತ್ಯಾಗ್ರಹ ಕೈಗೊಂಡರು. ಹೈದರಾಬಾದ್ ಪ್ರಾಂತ್ಯದಲ್ಲೆಡೆಯಲ್ಲಿ ಹಲವಾರು ಸತ್ಯಾಗ್ರಹ ಹಾಗೂ ಚಳುವಳಿಗಳು ಪ್ರಾರಂಭಗೊಂಡವು. ಹೈದರಾಬಾದ್ ನಿಜಾಂ ಇದನ್ನು ಉದ್ದೇಶಿಸಿ ತನ್ನ ಪೊಲೀಸ್ ಅಧಿಕಾರಿಗಳಿಂದ ಅವರನ್ನು ಬಂಧಿಸಿದನು. ಕಲಬುರ್ಗಿ ಜಿಲ್ಲೆಯ ಅನೇಕ ಭಾಗಗಳಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ನ ಚಟುವಟಿಕೆಗಳು ತೀವ್ರಗೊಂಡವು. ಹರ್ಡೇಕರ್ ಮಂಜಪ್ಪನವರು ಕಲಬುರ್ಗಿ ಜಿಲ್ಲೆಯ ಕೆಲಭಾಗಗಳಲ್ಲಿ ಸಂಚರಿಸಿ ಜನರಲ್ಲಿ ಸ್ವಾತಂತ್ರ್ಯದ ಕಿಚ್ಚು ಹಬ್ಬಿಸಿದರು. ಕಲಬುರ್ಗಿಯಲ್ಲಿ ೧೯೩೨ರಲ್ಲಿ ಪ್ರಥಮ ಭಾರಿಗೆ ಖಾದಿಭಂಡಾರವನ್ನು ಶ್ರೀಮಂತಾಳೆ ಕಾಂಗ್ರೆಸ್ ಕಾರ್ಯಕರ್ತರು ಪ್ರಾರಂಭಿಸಿದರು. ನಿಜಾಂ ಸರಕಾರದ ಕೆಲ ನಿರ್ಬಂಧನೆಗಳನ್ನು ತೆಗೆಯಲು ರಮಾನಂದತೀರ್ಥರು ಬೇಡಿಕೆಗಳನ್ನು ನಿಜಾಂನ ಮುಂದಿಟ್ಟರು.

೧. ನಿಜಾಂನ ನೇತೃತ್ವದಲ್ಲಿ ತಕ್ಷಣ ಹೈದರಾಬಾದಿನಲ್ಲಿ ಜವಾಬ್ದಾರಿ ಸರಕಾರದ ನೀಡಿಕೆ ಹಾಗೂ ಸ್ವಾತಂತ್ರ್ಯ ಭಾರತದ ಒಕ್ಕೂಟದಲ್ಲಿ ಸೇರುವ ತನ್ನ ಇಚ್ಛೆಯ ಪ್ರಕಟಣೆ.

೨. ತಕ್ಷಣ ಜನತಾ ಸ್ವಾತಂತ್ರ್ಯಗಳ ನೀಡಿಕೆಯ ಪ್ರಕಟಣೆ ಹಾಗೂ ಸಂಸ್ಥಾನೀ ಕಾಂಗ್ರೆಸ್‌ನ ಮೇಲಿನ ಪ್ರತಿಬಂಧದ ತೆರವು.

೩. ಎಲ್ಲ ರಾಜಕೀಯ ಕೈದಿಗಳ ಬಿಡುಗಡೆ[೧೧]

ಈ ರೀತಿ ರಮಾನಂದರು ಹೈದರಾಬಾದ್ ನಿಜಾಂನ ಎದುರು ತನ್ನ ಬೇಡಿಕೆಗಳನ್ನು ಇಟ್ಟರು. ಆದರೆ ನಿಜಾಂ ಅದನ್ನು ವೀಕ್ಷಿಸಿ ಅವರ ಬೇಡಿಕೆಗಳನ್ನು ನಿರಾಕರಿಸಿದನು. ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಹೈದರಾಬಾದ್ ಪ್ರಾಂತ್ಯದ ರಾಜಕೀಯ ಚಟುವಟಿಕೆಗಳಲ್ಲದೇ ಸಾರ್ವಜನಿಕ ಸೇವೆಗಳಿಗೆ ಹೆಚ್ಚು ಮಹತ್ವಕೊಟ್ಟಿತು. ನಿಜಾಂ ಸರಕಾರವನ್ನು ಭಾರತದ ಒಕ್ಕೂಟ ಸೇರಿಸಲು ಅನೇಕ ರೀತಿಯ ಪ್ರಯತ್ನಗಳು ನಡೆದವು. ಹೈದರಾಬಾದ್ ಕರ್ನಾಟಕ ಭಾಗದ ಜನರ ಮೇಲಿನ ದಬ್ಬಾಳಿಕೆಯನ್ನು ವಿರೋಧಿಸತೊಡಗಿತು.

೧೯೪೨ರ "ಭಾರತ ಬಿಟ್ಟು ತೊಲಗಿ" ಚಳುವಳಿಯು ಭಾರತದ ಸ್ವಾತಂತ್ರ್ಯದ ಹೋರಾಟದ ಮಹತ್ವದ ಘಟ್ಟವಾಗಿದೆ. ಈ ಚಳುವಳಿಯನ್ನು ಗಾಂಧೀಜಿಯವರು ಆರಂಭಿಸಿ, ಮುಂಬೈನ ಎ.ಐ.ಸಿ.ಸಿ ಅಧಿವೇಶನದಲ್ಲಿ ಘೋಷಿಸಿದಾಗ ಭಾರತದಲ್ಲೆಲ್ಲ ತೀವ್ರವಾಗಿ ಸ್ವಾತಂತ್ರ್ಯದ ಘೋಷಣೆಗಳು ಹರಡಿದವು. ದೇಶದ ಎಲ್ಲಾ ಕಾಂಗ್ರೆಸ್ ನಾಯಕರನ್ನು ಕರೆದು, ಬ್ರಿಟಿಷರ ವಿರುದ್ಧ ಹೋರಾಡಲು ಸಜ್ಜು ಮಾಡಿದರು. ಆಗ ಜನರಲ್ಲಿ ಸ್ವಾತಂತ್ರ್ಯ ಹೋರಾಟದ ಬೀಜ ಮೊಳಕೆಯೊಡೆಯಿತು. ಇದರ ಪ್ರಭಾವದಿಂದ ಕಲಬುರ್ಗಿ ಜಿಲ್ಲೆಯಾದ್ಯಂತ ಹೋರಾಟ ಪ್ರಾರಂಭವಾಯಿತು. ಸ್ವಾತಂತ್ರ್ಯ ಹೋರಾಟಗಾರರಾದ ಎನ್. ಜಿ. ಗೋರೆಯವರು ಗಣೇಶೋತ್ಸವದ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ಪ್ರಚೋದಿತ ಭಾಷಣ ಮಾಡಿದರು. ಆಗ ನಿಜಾಂ ಅಧಿಕಾರಿ ಇವರನ್ನು ಬಂಧಿಸಿದನು. ಈ ಸಮಯದಲ್ಲಿ ಕಲಬುರ್ಗಿ ಸ್ವಾತಂತ್ರ್ಯ ಹೋರಾಟಗಾರರಾದ ವಿದ್ಯಾಧರಗುರೂಜಿ, ಜಗನ್ನಾಥರಾವ್ ಚಂಡ್ರಿಕಿ, ಅಣ್ಣಾರಾವ ಗಣಮುಖಿ, ಡಿ.ಬಿ.ಕಲ್ಮಣಕರ್, ಅಣ್ಣಾರಾವ್ ವೀರಭದ್ರಪ್ಪಪಾಟೀಲ್, ಭೈರಪ್ಪ ಪಾಟೀಲ್ ಭೂಸನೂರ್, ಬಾವುಸಾಹೇಬ ದೇವುಳಗಾಂವಕರ್, ಭೀಮಸೇನಾಚಾರ್ಯ ಮೂಲ, ಶಿದ್ರಾಮುಪ್ಪ ಶಿವರಾಯಿ. ವಿಶ್ವನಾಥರೆಡ್ಡಿ, ವೀರಭದ್ರಪ್ಪ ಚನ್ನಪ್ಪ, ರಾಜಶೇಖರ್. ಇವರು ಪಾಲ್ಗೊಂಡಿದ್ದರು. ಕೆಲವು ವಿಮೋಚನಾ ಹೋರಾಟಗಾರರನ್ನು ಕೂಡ ನಿಜಾಂ ಪೊಲೀಸರು ಬಂಧಿಸಿದರು. "ದಿನಾಂಕ ೨೫ ಅಗಸ್ಟ್ ೧೯೪೩ರ "ಸಂಯುಕ್ತ ಕರ್ನಾಟಕ" ಪತ್ರಿಕೆಯಲ್ಲಿ ಪ್ರಕಟವಾಗಿರುವಂತೆ ಹೈದರಾಬಾದ್ ಕರ್ನಾಟಕದಲ್ಲಿ ಸುಮಾರು ೨೫ರಿಂದ ೨೭ ಜನ ಹೋರಾಟಗಾರರು ಬಂಧನಕೊಳ್ಳಪಟ್ಟಿದ್ದರೆಂದು ವ್ಯಕ್ತವಾಗುತ್ತದೆ." ನಿಜಾಂನು ಹೈದರಾಬಾದ್ ಪ್ರಾಂತ್ಯದಲ್ಲಿ ರಾಷ್ಟ್ರೀಯ ಚಳುವಳಿಗಳನ್ನು ನಡೆಯದಂತೆ ನೋಡಿಕೊಂಡನು. ಜನತೆ ಸ್ವಾತಂತ್ರ್ಯದ ಹಂಬಲದಿಂದ ನಿಜಾಂನ

ಪ್ರಾಂತ್ಯದಲ್ಲಿ ಚಳುವಳಿಗಳನ್ನು ಪ್ರಾರಂಭಿಸಿದರು. ಪ್ರಮುಖ ಹೋರಾಟಗಾರರಾದ ರಮಾನಂದ ತೀರ್ಥರು ರಾಷ್ಟ್ರಮಟ್ಟದಲ್ಲಿ ಹೋರಾಟ ಮಾಡಲು ಜನತೆಗೆ ಕರೆ ನೀಡಿದರು. ಈ ಧೀರ ನಾಯಕರ ಪ್ರೇರಣೆಯಿಂದ ಅನೇಕ ಭಾಗಗಳಲ್ಲಿ ಯುವಕರು ಸೇರಿ ರಾಷ್ಟ್ರೀಯ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಲು ಕಲಬುರ್ಗಿಯಲ್ಲಿ "ಪಾಂಡುರಂಗ ಕೃಷ್ಣಾ ಮಂಡಳಿ"ಯೊಂದನ್ನು ಸ್ಥಾಪಿಸಿದರು. ಪಾಂಡುರಂಗರಾವ್, ಖಂಡೇರಾವ್ ದೇವುಳಗಾಂವಕರ್, ಪಾಂಡುರಂಗ ಕೃಷ್ಣಾ ಬೇಡಕರ ಬಂಧುಗಳು, ಚುಮ್ಮನ ಚೇಡಕರ, ತಾಳಿಕೋಟೆಯ ಜಯರಾಮ ಮೊದಲಾದ ಹದಿನಾಲ್ಕು ಜನರು ಸೇರಿ, ತಿಲಕರ ಕಾರಾಗೃಹ ಶಿಕ್ಷೆಯ ವಿಚಾರವನ್ನೇ ನಾಟಕವಾಗಿಸಿದರು. 'ರಾಜಕೋಪಕ ಹರ' ಅಥವಾ 'ಬಂಧವಿಮೋಚನ' ಎಂಬ ಹೆಸರಿನಲ್ಲಿ ನಾಟಕ ಆಡಿದರು. ಹೀಗೆ ಅನೇಕ ರೀತಿಯ ಸಾಹಸ ಮಾಡಿ ಹೈದರಾಬಾದ್ ಜನತೆಯಲ್ಲಿ ಮೇಲೆ ರಾಷ್ಟ್ರೀಯ ಭಕ್ತಿ ಹೆಚ್ಚುವಂತೆ ಮಾಡಿದರು.

## ೨.೩. ಆರ್ಯ ಸಮಾಜದ ಪಾತ್ರ

ಹೈದರಬಾದ ವಿಮೋಚನಾ ಹೋರಾಟದ ಸಂದರ್ಭದಲ್ಲಿ ನಿಜಾಂನ ಮಂತಾಂತರದ ವಿರುದ್ಧ ನಡೆದ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರ ಮಹತ್ವದ್ದಾಗಿದೆ. ನಿಜಾಂನ ಮಂತಾಂಧತೆಯ ನೀತಿಯನ್ನು ಜನರಿಗೆ ತಿಳಿಸಿ ಜಾಗೃತೆಯನ್ನುಂಟು ಮಾಡಿದರು. ಹೈದರಾಬಾದ್ ನಿಜಾಂನ ಧಾರ್ಮಿಕ ನೀತಿಯನ್ನು ಪ್ರತಿಭಟಿಸಿ ಅನೇಕ ಆರ್ಯಸಮಾಜದ ಕಾರ್ಯಕರ್ತರು ಹುತಾತ್ಮರಾಗಿದ್ದರು. ನಿಜಾಂನ ಹಾಗೂ ಬ್ರಿಟಿಷರ ಆಡಳಿತ ನೀತಿಗಳನ್ನು ವಿರೋಧಿಸುತ್ತ ತಮ್ಮ ಹೋರಾಟವನ್ನು ತೀವ್ರಗೊಳಿಸಿದರು. ನಿಜಾಂ ಪೊಲೀಸರ ಲಾಠಿ, ಗೋಲಿಗಳಿಗೆ ಹೆದರದೆ ಅವನ ದುರಾಡಳಿತವನ್ನು ಜನತೆಗೆ ವಿವರಿಸುತ್ತಿದ್ದರು.

ಶ್ಯಾಮಜೀಕೃಷ್ಣವರ್ಮ, ರಾಮಪ್ರಸಾದಬಿಸ್ಮಲ್, ಲಾಲಾಲಜಪತರಾಯರ್, ಬಾಯಿಬಾಲಮುಕಂದ್, ಪಂಡಿತ್ ಕಾಶೀರಾಮ್, ಕಿಷನ್ ಸಿಂಹ ಗಡಗಜ್ಜ, ಸೋಹನಲಾಲ್ ಪಾಠಕ್ ಮುಂತಾದವರೆಲ್ಲಾ ಆರ್ಯ ಸಮಾಜದ ರಾಷ್ಟ್ರಮಟ್ಟದ ನಾಯಕರಾಗಿದ್ದರು. ಹೈದರಾಬಾದ್ ನಿಜಾಂನು ಆರ್ಯ ಸಮಾಜದ ಕಾರ್ಯಕರ್ತರನ್ನು ಬಂಧಿಸಿ, ಇವರ ಚಟುವಟಿಕೆಗಳನ್ನು ಮೊಟಕುಗೊಳಿಸಲು ಪ್ರಯತ್ನಿಸಿದನು. ಜನರಲ್ಲಿ ರಾಷ್ಟ್ರಾಭಿಮಾನ ಹೆಚ್ಚಿಸುತ್ತಾ ಶೈಕ್ಷಣಿಕ ಸಂಘಟನೆಗಳನ್ನು ಆರ್ಯ ಸಮಾಜ ಹಮ್ಮಿಕೊಂಡಿತು. ೧೯೨೮-೨೭ರ ವೇಳೆಗೆ ಆರ್ಯ ಸಮಾಜದ ಕಾರ್ಯಕರ್ತರು ಸೇರಿ ಹೈದರಬಾದ್ ಕರ್ನಾಟಕದ ಭಾಗವಾದ ಕಲಬುರ್ಗಿ, ಬೀದರ್, ರಾಯಚೂರ್ ಮುಂತಾದ ಪ್ರದೇಶಗಳಲ್ಲಿ ಆರ್ಯ ಸಮಾಜ ಕೇಂದ್ರಗಳನ್ನು ಸ್ಥಾಪಿಸಿದರು. ಆಗ ಕಲಬುರ್ಗಿಯಲ್ಲಿ ಆರ್ಯ ಸಮಾಜದ ಚಟುವಟಿಕೆಗಳು ಭರದಿಂದ ಸಾಗಿದವು. "೧೯೩೮ರ ಹೋಳಿಹಬ್ಬದ ಸಂದರ್ಭದಲ್ಲಿ ಮುಸ್ಲಿಂರ ದಂಗೆಯಾಯಿತು. ನಗರದಲ್ಲಿ

ಮುಸ್ಲಿಂ ಜನಸಂಖ್ಯೆಯು ಗಣನೀಯವಾಗಿದ್ದುದರಿಂದ ಅವರು ಕಾಲುಕೆದರಿ ಹಿಂದೂಗಳೊಂದಿಗೆ ಸಂಘರ್ಷಕ್ಕಿಳಿದರು. ಈ ಗಲಭೆಯಲ್ಲಿ ಓರ್ವ ಮುಸ್ಲಿಂ ಹತನಾದ, ಲಾಲಸಿಂಗ್, ವಿಜಯಪಾಲ, ಹಣಮಂತರಾವ್, ಬೈರವಲಾಲ, ಖುತುಸಿಂಗ್ ಮತ್ತು ಶರಣಪ್ಪ ಮುಂತಾದವರು ಈ ಗಲಭೆಯ ಅಪರಾಧಿಗಳೆಂದು ನಿಜಾಂ ಸರಕಾರದ ಆದೇಶದ ಮೇಲೆ ಕಲಬುರ್ಗಿ ನ್ಯಾಯಲಯ ಅವರಿಗೆ ಹತ್ತು ವರ್ಷಗಳ ಜೈಲು ಶಿಕ್ಷೆ ವಿಧಿಸಿತ್ತು. ೧೯೩೮ರ ಸುಮಾರಿನಲ್ಲಿ ಕಲಬುರ್ಗಿ ಕೇಂದ್ರ ಕಾರಾಗೃಹವು ಆರ್ಯ ಸಮಾಜ ಸತ್ಯಾಗ್ರಹಿಗಳಿಂದ ತುಂಬಿ ಹೋಗಿತ್ತು. ಶೇಷರಾವ್ ವಾಘಮೋರೆ, ನರಸಿಂಗ್ ಬಾಚಾ ಮೊದಲಾದ ನಲವತ್ತು ಜನರು ಸತ್ಯಾಗ್ರಹಿ ತಂಡದಲ್ಲಿದ್ದರು.[೨] ಹಿಂದೂ ಧರ್ಮದ ಹಬ್ಬ ಹರಿದಿನಗಳನ್ನು ಹತ್ತಿಕ್ಕಬೇಕೆಂಬ ನಿಜಾಂನ ದಬ್ಬಾಳಿಕೆಗೆ ಯಾವ ಹಿಂದೂಗಳು ಮಣಿಯದಾದರು. ಇದೇ ನಿಜಾಮನಿಗೆ ಮಾರಕವಾಯಿತು.

ಈ ನಾಯಕರನ್ನು ಬಿಡುಗಡೆ ಮಾಡಲು ಕಲಬುರ್ಗಿ ಜಿಲ್ಲೆಯಲ್ಲಿ ನಿಜಾಂ ಸರಕಾರದ ವಿರುದ್ಧ ಹೋರಾಟ ಕೈಗೊಂಡರು. ದತ್ತಾತ್ರೇಯರಾವ್ ಅವರಾದಿ, ವೈಜಯಂತ ಇರ್ವಿ, ಅಮರಸಿಂಹ ರಾಠೋಡ, ಮಹಾಗಾಂವ್‌ದ ಚಂದ್ರಶೇಖರ ಪಾಟೀಲ್, ಮಾಣಿಕರಾವ್ ಜೀ, ಚಿಂಚೋಳಿಯ ಅನಂತಶರ್ಮ, ವೇದಪ್ರಕಾಶಗಂಜೋಟ, ಆರ್.ವಿ.ಬಿಡಪ ಇವರ ಸೂಚನೆಯ ಮೇರೆಗೆ ಯಾದಗೀರ್, ಆಳಂದ, ಚಿಂಚೋಳಿ, ಜೀವರ್ಗಿ, ಸುರುಪುರ, ಅಫಲಜಲಪೂರ್ ಅನೇಕ ಭಾಗಗಳಲ್ಲಿ ಆರ್ಯ ಸಮಾಜದ ಮಂದಿರಗಳು ಹಾಗೂ ಕಚೇರಿಗಳು ಪ್ರಾರಂಭವಾದವು. ಹೈದರಾಬಾದ್ ಪ್ರಾಂತ್ಯದ ಜನತೆಗೆ ಸಮಾನ ಹಕ್ಕು, ಜಾತಿಪದ್ಧತಿ ಖಂಡನೆ, ಶಿಕ್ಷಣಗಳಲ್ಲಿ ಎಲ್ಲರಿಗೂ ಸರಿಸಮಾನದ ಹಕ್ಕು ಹಾಗೂ ಭಾರತೀಯ ರಾಷ್ಟ್ರ ಭಾಷೆಯನ್ನು ಜನರಲ್ಲಿ ಮೂಡಿಸುವುದು ಆರ್ಯ ಸಮಾಜದ ಕಾರ್ಯವಾಗಿತ್ತು. ಆರ್ಯ ಸಮಾಜದ ಕಾರ್ಯಕ್ರಮಗಳಿಗೆ ಆಕರ್ಷಿತರಾಗಿ ಹೈದರಾಬಾದ್ ಕರ್ನಾಟಕದ ಜನತೆ ಉತ್ಸಾಹಕರಾದರು. ಅನೇಕ ಆರ್ಯ ಸಮಾಜದ ನಾಯಕರು ಹೈದರಾಬಾದ್ ಕರ್ನಾಟಕದ ಉದ್ದಕ್ಕೂ ಸಂಚರಿಸಿ ಅದರ ಕಾರ್ಯ ಪ್ರವೃತ್ತಿಯನ್ನು ಸಾರಿದರು. ಆರ್ಯ ಸಮಾಜದ ನಾಯಕರು "ಭಾರತವು ಭಾರತೀಯರಿಗೆ" ಎಂಬ ಘೋಷಣೆಗಳನ್ನು ಕೂಗಿದರು. "ವಂದೇ ಮಾತಾರಂ" ಮಂತ್ರದಿಂದ ಹೈದರಾಬಾದ್ ಪ್ರಾಂತ್ಯದಲ್ಲೆಲ್ಲ ಸುತ್ತಾಡಿ ಸ್ವಾತಂತ್ರ್ಯದ ಕಹಳೆ ಊದಿದರು.

ನಿಜಾಂನ ವಿರುದ್ಧ ಹೋರಾಡಿ ಕಲಬುರ್ಗಿಯ ವಿಷ್ಣುಭಗವಾನಜೀ ತಮ್ಮ ಪ್ರಾಣವನ್ನೇ ಬಲಿಕೊಟ್ಟರು. ಹೀಗೆ ಅನೇಕ ರೀತಿಯ ಆರ್ಯ ಸಮಾಜದ ನಾಯಕರು ಹೈದರಾಬಾದ್ ನಿಜಾಂನ ವಿರುದ್ಧ ಹೋರಾಡಿ ಹುತಾತ್ಮರಾದರು. ಸೋಹನ್‌ಲಾಲ್ ವಾನಪ್ರಸ್ಥಿ, ಮಾರುತಿರಾವ್ ಶಿಂಧೆ, ಕಿಷನ್ ಜೋಷಿ, ಶ್ರೀಮತಿ ತುಳಸಿಬಾಯಿ ದಶರಥ, ಮಾರುತಿರಾವ್ ಬುಲ್ ಬುಲೆ, ಅಂಬಾಜೀರಾವ್ ಪುಲ್ಸೆ,

ಗೋಪಾಳರಾವ್ ನಿಗ್ಗುಡಿಗಿ, ಬನ್ಸಿಲಾಲ್ ಗೋದಾನಿ, ಮೋದೀನ್‌ಸಾಬ್ ಹಾಗೂ ಅವರ ತಂದೆ ಅಹ್ಮದ್‌ಸಾಬ್, ಅಬ್ದುಲ್ ಹಮೀರ್ ಮುಂತಾದ ನಾಯಕರು ನಿಜಾಂನ ವಿರುದ್ಧ ಹೋರಾಡಿದರು. ಇವರಲ್ಲಿ ಕೆಲವರು ಮುಸ್ಲಿಂ ಪಂಗಡದವರಾಗಿದ್ದರೂ ಆರ್ಯ ಸಮಾಜ ಕಾರ್ಯಕರ್ತರಾಗಿ ದೇಶ ಸೇವೆ ಸಲ್ಲಿಸಿದರು. ಕಲಬುರ್ಗಿಯ ಪ್ರಮುಖ ಆರ್ಯ ಸಮಾಜ ಹೋರಾಟಗಾರರಾದ ಚಂದ್ರ ಮೋಹನ ಚಿಲ್ಲಾಳ, ಸೂರಜ ಕರಣತಿವಾರಿ, ಮಹಾದೇವಪ್ಪ ಹೂಗಾರ, ಧರ್ಮವೀರಗಂಪಾ, ಶಿವಕುಮಾರಶಾಸ್ತ್ರಿ, ಅಮರ ಸಿಂಹರಾಠೋಡ್, ಗಿರಧರರಾವ್ ಜವಳಕರ್, ದತ್ತಾತ್ರೇಯರಾವ್ ಅವರಾದಿ, ಅಲ್ಲದೆ ಇನ್ನೂ ಅನೇಕ ಜನ ಕಲಬುರ್ಗಿ ಆರ್ಯ ಸಮಾಜ ಮುಖೇನ ಸಕ್ರಿಯ ಕಾರ್ಯ ಕರ್ತರಾಗಿದ್ದರೆಂದು ಹೋರಾಟಗಾರರಾದ ವಿದ್ಯಾಧರ ಗುರೂಜಿ ಹೇಳುತ್ತಾರೆ. ನಿಜಾಂ ಹಾಗೂ ಬ್ರಿಟಿಷರು ಈ ಕಾರ್ಯಕರ್ತರ ಮೇಲೆ ಸದಾ ಕಣ್ಣಿಟ್ಟಿದ್ದರು. ಕೆಲಜನ ಹೋರಾಟಗಾರರಿಗೆ ಸಾರ್ವಜನಿಕ ಸಭೆಗಳಿಗೆ ಹೋಗಲು ಅವಕಾಶವಿರಲಿಲ್ಲ. ಒಂದು ವೇಳೆ ಹೋದರೆ ಅವರನ್ನು ನಿಜಾಂ ಪೋಲಿಸರು ಬಂಧಿಸುತ್ತಿದ್ದರು.

### ೨.೪. ಭಾಷೆ ದಬ್ಬಾಳಿಕೆ

ಹೈದರಾಬಾದ್ ನಿಜಾಂರೆಂದೇ ಪ್ರಸಿದ್ಧವಾದ ಅಸಫಶಾಹಿ ಮನೆತನದವರು ಕ್ರಿ.ಶ.೧೭೨೧ ರಿಂದ ಕ್ರಿ.ಶ.೧೯೪೮ರವರೆಗೆ ಹೈದರಾಬಾದ್ ಪ್ರಾಂತ್ಯವನ್ನು ಆಳಿದರು. ಈ ಹೈದರಾಬಾದ್ ಪ್ರಾಂತ್ಯದಲ್ಲಿ ಬಹು ಭಾಷೆಯನ್ನಾಡುವವರಿದ್ದರಿಂದ ಮರಾಠಿ, ತೆಲಗು, ಕನ್ನಡ, ಪಾರ್ಸಿ, ಅರಬ್ಬಿ ಭಾಷೆಗಳು ಪ್ರಚಲಿತದಲ್ಲಿದ್ದವು. ಆದರೆ ಮುಂದೆ ಹೈದರಾಬಾದ್ ಪ್ರಾಂತ್ಯವು ಭಾರತದ ಒಕ್ಕೂಟ ಸೇರುವವರೆಗೆ ತನ್ನ ಹಳೆಯ ಭಾಷೆಗಳನ್ನು ಬದಲಿಸಿ ಉರ್ದು ಭಾಷೆಯನ್ನು ಹೇರಿತು. ಜನರು ಉರ್ದು ಹಾಗೂ ತೆಲಗು, ಮರಾಠಿ, ಕನ್ನಡ, ಭಾಷೆಗಳನ್ನು ರೂಢಿಸಿಕೊಂಡರು. ಆಡಳಿತಕ್ಕಾಗಿ ಉರ್ದು ಭಾಷೆಯನ್ನು ಬಳಸುತ್ತಿದ್ದರು. ಬ್ರಿಟಿಷರ ಸ್ನೇಹ ಹಾಗೂ ಸಹಾಯ ಪಡೆಯುತ್ತಿದ್ದ ನಿಜಾಂ ಅವರ ಭಾಷೆಯಾದ ಇಂಗ್ಲಿಷ್‌ನ್ನು ತನ್ನ ಸರಕಾರದೊಡನೆ ಸೇರಿಸಿಕೊಂಡನು. ಈ ಭಾಷೆ ಸಾರ್ವಜನಿಕರಿಗೆ ವಗ್ಗದಾಯಿತು. ನಿಜಾಂ ಸಂಸ್ಥಾನದಲ್ಲಿಂದ ಉರ್ದು ಭಾಷೆ ಹೈದರಾಬಾದ್ ಪ್ರಾಂತ್ಯದಲ್ಲಿ ಪ್ರಚಲಿತಗೊಂಡಿತು.

ಇದರ ಪರಿಣಾಮವಾಗಿ ಶಿಕ್ಷಣ ಕ್ಷೇತ್ರಗಳಲ್ಲೂ ಕೂಡ ಉರ್ದುಭಾಷೆ ಕಡ್ಡಾಯವಾಗಿತ್ತು. ಮುಸ್ಲಿಂ "ಮದರಸಾ"ಗಳೆಂದು ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ಪ್ರೋತ್ಸಾಹಕೊಟ್ಟರು. ಇದರಲ್ಲಿ ಖುರಾನ್ ಹಾಗೂ ಗಣಿತ, ನೀತಿಶಾಸ್ತ್ರ ಎಂಬ ವಿಷಯಗಳನ್ನು ಉರ್ದುವಿನಲ್ಲಿ ಅಭ್ಯಾಸ ಮಾಡುತ್ತಿದ್ದರು. "ಕ್ರಿ.ಶ.೧೮೫೪ರಲ್ಲಿ ಐದನೇ ಅಸಫಜಹಾನ್‌ನ ಪ್ರಧಾನ ಮಂತ್ರಿಯಾಗಿದ್ದ ಸಾಲಾರ್ ಜಂಗ್‌ನು

ಶೈಕ್ಷಣಿಕ ಕ್ಷೇತ್ರದಲ್ಲಿ ಬದಲಾವಣೆಯನ್ನು ತಂದನು. "ದಾರುಲ್ ಉಮಾಮ್ ಪೌರವ್ಯವಸ್ಥೆ" ಶಿಕ್ಷಣ ಸಂಸ್ಥೆ ಸ್ಥಾಪಿಸಿ, ಸಾರ್ವಜನಿಕರಿಗೆ ಶಿಕ್ಷಣ ವ್ಯವಸ್ಥೆ ಮಾಡಿಕೊಟ್ಟನು.[೧೩] ನಿಜಾಂ ಸರಕಾರ ಕೆಲ ತಾಲ್ಲೂಕು ಹಾಗೂ ಜಿಲ್ಲಾ ಭಾಗಗಳಲ್ಲಿ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ, ಪರ್ಷಿಯನ್ ಹಾಗೂ ಉರ್ದು ಭಾಷೆಯನ್ನು ಶಿಕ್ಷಣಕ್ಕೆ ಪ್ರಾಧಾನ್ಯ ಕೊಡಲು ಹೇಳಿದ, ಉರ್ದು ರಾಜ್ಯ ಭಾಷೆಯೆಂದು ಘೋಷಿಸಿ, ಶೈಕ್ಷಣಿಕದಲ್ಲಿ ಕಡ್ಡಾಯಗೊಳಿಸಿದ. ಇದರಿಂದಾಗಿ ಕನ್ನಡ, ಮರಾಠಿ, ತೆಲಗು, ಭಾಷೆಗಳಿಗೆ ಪ್ರಾಧಾನ್ಯತೆ ಸಿಗಲಿಲ್ಲ. ಇವು ತಮ್ಮ ಅಸ್ಥಿತ್ವಗಳನ್ನು ಕಳೆದುಕೊಳ್ಳಲು ಪ್ರಾರಂಭಗೊಂಡವು. ಜನರಿಗೆ ಉರ್ದು ಭಾಷೆಯ ಶಿಕ್ಷಣ ಸರಿಯಾದ ರೀತಿಯಲ್ಲಿ ಒಗ್ಗಲಿಲ್ಲ. ಅನೇಕರು ಶಿಕ್ಷಣವನ್ನು ಬಿಟ್ಟರು. ನಿಜಾಂನ ಕಾಲದ ಶಿಕ್ಷಣ ಮಟ್ಟವನ್ನು ನಾವು ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಉಲ್ಲೇಖವಾದುದ್ದನ್ನು ನೋಡಬಹುದು.[೧೪]

| ವರ್ಷ | ಹಿಂದೂ ವಿದ್ಯಾರ್ಥಿಗಳು | ಮುಸ್ಲಿಂ ವಿದ್ಯಾರ್ಥಿಗಳು |
|---|---|---|
| ೧೯೧೧ | ೩.೮ | ೧೨.೫ |
| ೧೯೨೧ | ೧೦ | ೪೬.೨ |
| ೧೯೨೭-೨೮ | ೧೨.೨ | ೫೪.೬ |
| ೧೯೪೧ | ೧೭.೧ | ೭೭.೧ |

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಇದರಲ್ಲಿ ವರ್ಷದಿಂದ ವರ್ಷಕ್ಕೆ ಹಿಂದೂ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗುತ್ತಾ, ಮುಸ್ಲಿಂ ವಿದ್ಯಾರ್ಥಿಗಳ ಸಂಖ್ಯೆ ದ್ವಿಗುಣಗೊಂಡಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ನಿಜಾಂನ ಭಾಷನೀತಿ ಹಾಗೂ ಶಿಕ್ಷಣ ನೀತಿಗಳೇ ಕಾರಣವಾಗಿದ್ದವು. ಇದನ್ನು ಅರಿತುಕೊಂಡ ಹೈದರಾಬಾದ್ ಕರ್ನಾಟಕದ ಜನತೆ ಈ ನೀತಿಗಳನ್ನು ವಿರೋಧಿಸಲು ಹಾಗೂ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಲು ದೇಶೀಯ ಭಾಷೆಯ ಶಿಕ್ಷಣದ ಅಗತ್ಯವನ್ನು ಅರಿತುಕೊಂಡು ನಿಜಾಂನ ದ್ವಿಮುಖ ನೀತಿಯ ವಿರುದ್ಧ ಸಿಡಿದೆದ್ದರು. ದೇವುಳಗಾಂವಕರ್ ಎಂಬುವವರು ಕ್ರಿ.ಶ.೧೯೦೭ರಲ್ಲಿ 'ನೂತನ ವಿದ್ಯಾಲಯ' ಸಾರ್ವಜನಿಕ ಗ್ರಂಥಾಲಯವನ್ನು ಆರಂಭಿಸಿದರೆ, ಶರಣ ಬಸವೇಶ್ವರ ಸಂಸ್ಥಾನವು 'ಶರಣಬಸವೇಶ್ವರ ವಾಚನಾಲಯ'ವನ್ನು ಪ್ರಾರಂಭಿಸಿತು. ಯಾದಗಿರಿ ಹಾಗೂ ಸುರಪುರದಲ್ಲಿ 'ಕನ್ನಡ ಸಾಹಿತ್ಯ ಸಂಸ್ಥೆ' ಹುಟ್ಟಿಕೊಂಡು ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಪ್ರಸಾರಗೊಳಿಸುವ ಕೆಲಸ ಈ ಸಂದರ್ಭದಲ್ಲಿ ನಡೆಯಿತು. ಈ ಸಮಯದಲ್ಲಿ ಸಿಕ್ಕ ಶಿಕ್ಷಣವೇ ಹೈದರಾಬಾದ್ ಕರ್ನಾಟಕ ಭಾಗ ಹಿಂದುಳಿಯಲು ಕಾರಣವಾಯಿತು.

ಕಲಬುರ್ಗಿಯಲ್ಲಿ ಗುರಯ್ಯಾ ಮಾಸ್ತರವರು ಬ್ರಹ್ಮಪುರದ ಮಲ್ಲಿಕಾರ್ಜುನ ಮಠದಲ್ಲಿ ಕನ್ನಡ ಶಾಲೆ ಆರಂಭಿಸಿ ಬ್ರಿಟಿಷ ಹಾಗೂ ನಿಜಾಂನ ಆಜ್ಞೆಯನ್ನು ಉಲ್ಲಂಘಿಸಿದರು. ಅಲ್ಲಿಯ ಸರಕಾರದ ಅನುಮತಿಯ ಮೆರೆಗೆ ಕಲಬುರ್ಗಿಯಲ್ಲಿ ಪ್ರೌಢಶಾಲೆಯನ್ನು ತೆರೆದು ಸರಕಾರದ ನಿಯಮಾನುಸಾರ ಅಲ್ಲಿಯ ಶಿಕ್ಷಕರು ವಾರಕ್ಕೆ ಎರಡು ದಿವಸ ಮಾತ್ರ ಕನ್ನಡ ಕಲಿಸುತ್ತಿದ್ದರು. ಯಾದಗಿರಿಯಲ್ಲಿ ೧೯೧೦ರಲ್ಲಿ "ಶಂಕರಣ್ಣಸಜ್ಜನ ಸಂಸ್ಕೃತ" ವಿದ್ಯಾಪೀಠವನ್ನು ಸ್ಥಾಪಿಸಿ, ಇದರಲ್ಲಿ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಪ್ರೇಮ, ತ್ಯಾಗ, ಬಲಿದಾನಗಳನ್ನು ಬೋಧಿಸಿ ಅಲ್ಲಿ ವಿದ್ಯಾರ್ಥಿಗಳಿಗೆ ಧೈರ್ಯ ತುಂಬುತ್ತಿದ್ದರು. ಗುಲ್ಬರ್ಗಾದಲ್ಲಿ "ಹಿಂದಿ ಪ್ರಚಾರ ಸಭಾ" ೧೯೪೨ರಲ್ಲಿ ಪ್ರಾರಂಭಗೊಂಡಿತು. ಯಾದಗೀರ್, ಗುರುಮಿಠಕಲ್, ಶಾಹಬಾದ್, ಅನೇಕ ಭಾಗಗಳಲ್ಲಿ ಆರ್ಯ ಸಮಾಜದ ಶಾಲೆಗಳು ಸ್ಥಾಪನೆಗೊಂಡವು. ಇವು ರಾಷ್ಟ್ರದಲ್ಲಿ ಶಾಂತಿ ಹಾಗೂ ಸಮಾನತೆಗೆ ಹೋರಾಡಲು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದವು. ೧೯೧೧ರಲ್ಲಿ ವೆಂಕಟಕೃಷ್ಣರಾವ್‌ರವರ ಮೇರೆಗೆ ಚಿಂಚೋಳಿಯಲ್ಲಿ ಉಸ್ಮಾನಿಯ ಮಾಧ್ಯಮಿಕ ಶಾಲೆ ಅಸ್ತಿತ್ವಕ್ಕೆ ಬಂದಿತು. ಈ ಶಾಲೆಯಲ್ಲಿ ಪ್ರತಿದಿನ ಎರಡು ಸಲ ಪ್ರಾರ್ಥನೆ ನಡೆಸುತ್ತಿದ್ದರು. "ವಂದೇ ಮಾತರಂ" ಹಾಗೂ "ಮಾತೃಭೂಮಿ ಜನನಿ ನಿನ್ನ" ಎಂಬ ಪ್ರಾರ್ಥನಾ ಗೀತೆಗಳನ್ನು ವಿದ್ಯಾರ್ಥಿಗಳು ಹಾಡುತ್ತಿದ್ದರು. ಈ ಎಲ್ಲಾ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ರಾಷ್ಟ್ರಭಕ್ತಿ, ಸ್ವಾತಂತ್ರ್ಯದ ಸಲುವಾಗಿ ಹೋರಾಡಲು ಹೇಳುತ್ತಿದ್ದರು. ಶಾಲೆಗಳ ಮುಂದೆ ಉರ್ದು ನಾಮಫಲಕ ಹಾಕಿ ಒಳಗಡೆ ಕನ್ನಡ ಪಾಠಗಳನ್ನು ಬೋಧಿಸುತ್ತಿದ್ದರು. ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟಕ್ಕೆ ಕಲಬುರ್ಗಿ ಜಿಲ್ಲೆಯ ಶಿಕ್ಷಣ ಸಂಸ್ಥೆಗಳು ಪರೋಕ್ಷಶವಾಗಿ ಬೆಂಬಲ ನೀಡಿ ಸಹಕರಿಸಿವೆ. ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟಗಾರರಾದ ರಮಾನಂದ ತೀರ್ಥ, ಜನಾರ್ಧನರಾವ್ ದೇಸಾಯಿ, ಆರ್.ಬಿ.ಬಿಡಪ್, ವೀರೇಂದ್ರ ಪಾಟೀಲ್, ಅಣ್ಣಾರಾವ್ ಗಣಮುಖಿ, ಜಗನ್ನಾಥರಾವ್ ಚಂಡ್ರಿಕಿ, ದತ್ತಾತ್ರೇಯ ಅವರಾದಿ, ವಿ.ಪಿ.ದೇವುಳಗಾಂವಕರ್ ಇವರೆಲ್ಲರು ವಿದ್ಯಾರ್ಥಿಗಳಿಗೆ ಬೋಧನೆ ಮಾಡುತ್ತಾ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸುತ್ತಿದ್ದರು.

## ೨.೫. ವಂದೇ ಮಾತರಂ

ಹಲವಾರು ಜಾತಿ, ಜನಾಂಗ, ಧರ್ಮ, ಭಾಷೆಗಳನ್ನು ಹಲವಾರು ರಾಜ್ಯಗಳನ್ನು ಒಳಗೊಂಡ ವಿಭಿನ್ನ ಬೌಗೋಳಿಕ ವೈಶಿಷ್ಟಗಳಿಂದ ಕೂಡಿದ ಭಾರತ ದೇಶವು ವಿವಿಧತೆಯಲ್ಲಿ ಏಕತೆಯನ್ನು, ಏಕತೆಯಲ್ಲಿ ವಿವಿಧತೆಯನ್ನು ಮೈಗೂಡಿಸಿಕೊಂಡ ದೇಶವಾಗಿದೆ. ಬ್ರಿಟಿಷರು ನಮ್ಮ ದೇಶವನ್ನು ಆಳುತ್ತಿದ್ದ ಸಂದರ್ಭದಲ್ಲಿ ದೇಶೀಯ ರಾಜರುಗಳ ಪಾಳೇಯ ಪಟ್ಟುಗಳ ಒಳಾಡಳಿತ ವ್ಯವಸ್ಥೆಯು ದೇಶವನ್ನು ಒಂದೇ ಭೌಗೋಳಿಕ ಲಕ್ಷಣಗಳಡಿಯಲ್ಲಿ ಒಂದು ಗೂಡಿಸುವ ಪ್ರಯತ್ನವನ್ನು ವಿಫಲಗೊಳಿಸುತ್ತಿದ್ದವು. ಉದಾಹರಣೆಗೆ ಹೈದರಾಬಾದ್ ನಿಜಾಂನು ತನ್ನ ಪ್ರದೇಶದಲ್ಲಿ ಸ್ವಾತಂತ್ರ್ಯದ

ಶಕ್ತಿ ಮಂತ್ರವಾದ ''ವಂದೇ ಮಾತರಂ'' ಘೋಷಣೆಯನ್ನು ಕೂಗಲು ಸಹ ನಿಷೇಧ ಹೇರಿದ್ದನು. ಮನುಷ್ಯ ತಾಯ್ನಾಡಿಗೆ ತನ್ನ ಪ್ರಾಣವನ್ನು ಕೊಟ್ಟು ತನ್ನ ಹೆಸರನ್ನು ಉನ್ನತ ಸ್ಥಾನಕ್ಕೆ ಒಯ್ಯುತ್ತಾನೆ. ತ್ಯಾಗ, ಬಲಿದಾನಗಳನ್ನು ಮಾಡುವುದನ್ನು ರಾಷ್ಟ್ರಭಕ್ತಿಯೆಂದು ಕರೆಯುತ್ತಾರೆ. ಸ್ವಾತಂತ್ರ್ಯ ಹೋರಾಟಗಾರರು, ಕ್ರಾಂತಿಕಾರಿಗಳು, ಹಾಗೂ ದೇಶಭಕ್ತರು, ''ವಂದೇ ಮಾತರಂ'' ರಾಷ್ಟ್ರಗೀತೆಯಿಂದ ಸ್ಫೂರ್ತಿ ಪಡೆದು ರಾಷ್ಟ್ರ ವಿಮೋಚನೆ ಹೋರಾಟದಲ್ಲಿ ಭಾಗವಹಿಸಿದರು. ಅನೇಕ ವಿಮೋಚನಾ ಹೋರಾಟಗಾರರು ವಂದೇ ಮಾತರಂ ಕೂಗುತ್ತಾ ತಮ್ಮ ಪ್ರಾಣ ಬಿಟ್ಟಿದ್ದಾರೆ. ಹೈದರಾಬಾದ್ ನಿಜಾಂ ಪ್ರಾಂತ್ಯದಲ್ಲಿ ಈ ಗೀತೆ ಹೋರಾಟಗಾರರಿಗೆ ಸ್ವಾತಂತ್ರ್ಯದ ಮಂತ್ರವಾಗಿತ್ತು. ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಮುಖಂಡರು, ಆರ್ಯಸಮಾಜ ಮುಖಂಡರು ಈ ಗೀತೆಯನ್ನು ಹಾಡಿ ನಿಜಾಂ ಹಾಗೂ ಬ್ರಿಟಿಷರ ಲಾಠಿ ಏಟಿಗೆ ತುತ್ತಾದರು. ಕಲಬುರ್ಗಿ ಜಿಲ್ಲೆಯ ಭಾಗಗಳಲ್ಲಿ ವಂದೇ ಮಾತರಂ ಗೀತೆಯನ್ನು ತಮ್ಮ ಉಸಿರಾಗಿಸಿಕೊಂಡಿದ್ದರು.

''ಛೀನ್ ಸಕ್ತೀ ಹೈ ನಹೀ ಸರಕಾರ್ ವಂದೇ ಮಾತರಂ
ಹಮ್ ಗರಿಬೋಕೇ ಗಲೇಕಾ ಹಾರ್ ವಂದೇ ಮಾತರಂ
ಹಾಥಮೇ ಬೇಡೀ ಗಲೇ ಮೇ ಭೋಂಕ್ ದೇ ಶೂಲೀ ಚಢಾ
ಫರ್‌ನ ಛೋಡೇಂಗೇ ಕಭೀ ಹಮ್ ವಂದೇ ಮಾತರಂ
ಮಂತ್ರ ವಂದೇ ಮಾತರಂ ಹೈ ತಂತ್ರ ವಂದೇ ಮಾತರಂ
ಹಮ್ ಗರೀ ಬೋಂಕೇ ಗಲೇಕಾ ಹಾರ್ ವಂದೇ ಮಾತರಂ''[೧೫]

''ನಿಜಾಂ ಸರಕಾರ ನಮ್ಮಿಂದ ವಂದೇ ಮಾತರಂ ಬೇರ್ಪಡಿಸಲು ಸಾಧ್ಯವಿಲ್ಲ. ನಮ್ಮ ಬಡವರ ಸ್ವರ ವಂದೇ ಮಾತರಂ ಕೈಗೆ ಕೋಳವನ್ನು ಹಾಕಿದರು ನಾವು ಬಿಡಲಾರೆವು ವಂದೇ ಮಾತರಂ, ನಮ್ಮ ಬಡವರ ಸ್ವರ ವಂದೇ ಮಾತರಂ'' ಎಂಬರ್ಥದಲ್ಲಿ ವಿಮೋಚನಾ ಹೋರಾಟಗಾರರು ''ವಂದೇ ಮಾತರಂ'' ಗೀತೆಯನ್ನು ಕಲಬುರ್ಗಿ ಜಿಲ್ಲೆಯ ಭಾಗಗಳಲ್ಲೆಲ್ಲ ಹಾಡಿ ಜನರಲ್ಲಿ ರಾಷ್ಟ್ರ ಭಕ್ತಿಯನ್ನು ಹೆಚ್ಚಿಸುತ್ತಿದ್ದರು. ಆದರೆ ನಿಜಾಂ ಸರಕಾರ ಈ ಗೀತೆ ಹಾಡಲು ಅನುಮತಿ ನೀಡಿರಲಿಲ್ಲ. ಶಾಲಾ-ಕಾಲೇಜುಗಳಲ್ಲಿ ಕೇವಲ ಉರ್ದುಭಾಷೆಯ ''ತಾಬರ್ ಖಾಲಿಕೇಯಾಲಂ ಮರಿಯಾ ಸತ್ರಾತೇ'' ಎಂಬ ಪ್ರಾರ್ಥನೆ ಮಾಡಲು ನಿಜಾಂ ಆದೇಶ ಹೊರಡಿಸಿದನು. ಇದರ ಅರ್ಥ ನಿಜಾಂನು ಚಿರಕಾಲ ಬಾಳಲಿ ಆತನ ಸಾಮ್ರಾಜ್ಯ ಸೂರ್ಯ ಚಂದ್ರರಿರುವವರೆಗೂ ಮುಂದುವರಿಯಲಿ ಎಂಬುದಾಗಿತ್ತು. ವಿದ್ಯಾರ್ಥಿಗಳು 'ವಂದೇ ಮಾತರಂ' ಹಾಡಿದರೆ ಅವರನ್ನು ಶಾಲಾ-ಕಾಲೇಜುಗಳಿಂದ ಡಿಬಾರ್ ಮಾಡಲಾಗುತ್ತಿತ್ತು. ಅದರಂತೆ ಶಾಲೆಯ ಶಿಕ್ಷಕರು ಅಥವಾ ಅಧಿಕಾರಿಗಳು ರಾಷ್ಟ್ರ ಮಂತ್ರವನ್ನು ಹಾಡಿದರೆ ಅವರನ್ನು ನೌಕರಿಯಿಂದ ತೆಗೆದು ಬಿಡುತ್ತಿದ್ದರು ಎಂದು ಡಾ.ಶೈಲಜಾ ಉಡಚಣ ಅವರು ತಮ್ಮ ಶಾಲೆಗೆ ಹೋಗುವ ದಿನಗಳನ್ನು ನೆನಪಿಸುತ್ತಾರೆ.

ಕಲಬುರ್ಗಿ ವಿಮೋಚನಾ ಹೋರಾಟಗಾರರಾದ ಪುರಾಣಿಕರವರು ಜಗನ್ನಾಥರಾವ್ ಚಂಡ್ರಿಕಿ, ಡಾ.ಪದ್ಮನಾಭ ಪುರಾಣಿಕರವರು ವಿದ್ಯಾರ್ಥಿ ನಾಯಕರು ಹಾಗೂ ಉಪಾಧ್ಯಯರಾಗಿದ್ದ ಧಾರವಾಡ ಮಾಸ್ತರ್‌ರವರು ವಂದೇ ಮಾತರಂ ಗೀತೆಯನ್ನು ಹಾಡಿದರು. ಇದಕ್ಕೆ ನಿಜಾಂ ಸರಕಾರ ಪೊಲೀಸರು ಕಾನೂನೂ ವಿರುದ್ಧ ಗೀತೆಯನ್ನು ಹಾಡಿದ್ದೀರಿ ಎಂದು ಧಾರವಾಡಕರ್‌ರವರನ್ನು ಬಂಧಿಸಿದರು. ಅದರಂತೆ ಪ್ರಾಧ್ಯಾಪಕರಾಗಿದ್ದ ಜಿ.ಎಂ.ಸರಾಫರವರನ್ನು ಆಜ್ಞೆಯನ್ನು ಉಲ್ಲಂಘಿಸಿದಕ್ಕಾಗಿ ನೌಕರಿಯಿಂದ ಹೊರ ಹಾಕಲಾಯಿತು. ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ವಂದೇ ಮಾತರಂ ಗೀತೆಯನ್ನು ಹಾಡಿ ನಿಜಾಂನ ವಿರುದ್ಧ ಹೋರಾಡಿದ ಜಗನ್ನಾಥರಾವ್ ಚಂಡ್ರಿಕಿ, ನಾರಾಯಣರಾವ್ ಕಾನ್ಹಿಳ್, ಸರದಾರ್ ಶರಣಗೌಡ ಪಾಟೀಲ್, ಚನ್ನಬಸಪ್ಪ ಕುಳಗೇರಿ ಹಾಗೂ ಜಯತೀರ್ಥ ರಾಜ ಪುರೋಹಿತ ಮುಂತಾದ ಯುವಕರು ಜೈಲುವಾಸ ಅನುಭವಿಸಿ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಹೊರಬೀಳಬೇಕಾಯಿತು. ಈ ವಿದ್ಯಾರ್ಥಿಗಳಿಗೆ ಮೈಸೂರು ಹಾಗೂ ಮದ್ರಾಸ್ ವಿಶ್ವವಿದ್ಯಾಲಯಗಳು ಸಹ ಪ್ರವೇಶ ಕೊಡಲಿಲ್ಲ. ಕೊನೆಗೆ ನಾಗಪುರ ವಿಶ್ವವಿದ್ಯಾಲಯದ ಉಪಕುಲಪತಿ ಟಿ.ಜಿ.ಕೇದಾರ ಅವರು ನಾಗಪುರ ವಿಶ್ವವಿದ್ಯಾಲಯ ದಲ್ಲಿ ಪ್ರವೇಶಕೊಟ್ಟರು.

ಕಲಬುರ್ಗಿ ಜಿಲ್ಲೆಯ ಅನೇಕ ಭಾಗಗಳಲ್ಲಿ ವಂದೇ ಮಾತರಂ ಗೀತೆಯನ್ನು ಮುಖ್ಯ ಬೀದಿಗಳಲ್ಲಿ ಹಾಡುತ್ತಾ ಪ್ರಭಾತ್ ಫೇರಿಯನ್ನು ನಡೆಸುತ್ತಿದ್ದರು. ಈ ವಿಮೋಚನಾ ಹೋರಾಟದಲ್ಲಿ ನಿಜಾಂ ಪೊಲೀಸರ ಲಾಠಿ ಏಟು ಮತ್ತು ಬ್ರಿಟಿಷರ ಗುಂಡುಗಳು ವೀರಯೋಧರ ದೇಹವನ್ನು ಸೇರಿದವು. ಆದರೆ ''ವಂದೇ ಮಾತರಂ'' ಮಂತ್ರದ ಘೋಷಣೆ ಕಡಿಮೆಯಾಗಲಿಲ್ಲ. ತ್ಯಾಗ, ಬಲಿದಾನ, ಹೋರಾಟದಿಂದ ಭಾರತ ೧೫ ಅಗಸ್ಟ್ ೧೯೪೭ರಂದು ಸ್ವಾತಂತ್ರ್ಯವಾಯಿತು. ಪರಕೀಯರ ಆಡಳಿತದಿಂದ ಮುಕ್ತಗೊಂಡಿತು. ದೇಶದಲ್ಲೆಡೆ ಸಂತೋಷ, ಸಂಭ್ರಮ ಆಚರಿಸುತ್ತಿದ್ದರು. ಸ್ವಾತಂತ್ರ್ಯದ ಕನಸು ನನಸಾಗಿ ಹೋಯಿತು ಎಂದು ಆನಂದ ಪಟ್ಟರು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕರು ಹೈದರಾಬಾದ್ ಪ್ರಾಂತ್ಯದ ಜನತೆಗೆ ಸ್ವಾತಂತ್ರ್ಯದ ಸಂತೋಷವಿರಲಿಲ್ಲ.

## ೨.೬. ಒಕ್ಕೂಟ ಚಳವಳಿ

ಕ್ರಿ.ಶ.೧೯೪೭ ಅಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯದ ರುಚಿಯನ್ನು ಸವಿಯುತ್ತಿದ್ದರೆ ಅದು ಹೈದರಾಬಾದ್ ಕರ್ನಾಟಕದ ಭಾಗಕ್ಕೆ ನುಂಗಲಾರದ ತುತ್ತಾಗಿತ್ತು. ಹೈದರಾಬಾದ್ ನಿಜಾಂನಾದ ಮೀರ್ ಉಸ್ಮನಾ ಅಲಿಖಾನ್ ಭಾರತ ಒಕ್ಕೂಟಕ್ಕೆ ಸೇರಲು ನಿರಾಕರಿಸಿದನು. ಆಗ ಈ ಭಾಗದ ಜನತೆಗೆ ವಿಮೋಚನೆಯ ಕರೆ ಕೊಟ್ಟವರೇ ರಮಾನಂದ ತೀರ್ಥರು. ನಿಜಾಂನ ವಿರುದ್ಧ ಘೋಷಣೆ ಕೂಗಿ, ಸುಲ್ತಾನ ಬಜಾರನ ಭಾಗದಲ್ಲಿ ತ್ರಿವರ್ಣ ಧ್ವಜವನ್ನು ಹಾರಿಸಿದರು. ಆಗ ವಿಮೋಚನಾ

ಹೋರಾಟಗಾರರನ್ನು ನಿಜಾಂ ಸರಕಾರ ಬಂಧಿಸಿತು. ಕಲಬುರ್ಗಿಯ ಜನಾರ್ಧನರಾವ್ ದೇಸಾಯಿಯವರು ನಿಜಾಮ ಪೊಲೀಸ್ ರಿಂದ ತಪ್ಪಿಸಿಕೊಂಡು ಬಿಜಾಪುರಕ್ಕೆ ಹೋದರು. ೧೮ನೇ ಅಗಸ್ಟ್ ೧೯೪೭ರಂದು ನಿಜಾಂ ಸರಕಾರವು ಒಂದು ಫರಮಾನ್ ಹೊರಡಿಸಿದನು. ಹೈದರಾಬಾದ್ ಭಾಗದ ಜನತೆಯ ಮೇಲೆ ಮೆರವಣಿಗೆ, ವಾಕ್‌ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯ ಹಾಗೂ ಪತ್ರಿಕೆಗಳ ಸ್ವಾತಂತ್ರ್ಯಗಳ ನಿರ್ಬಂಧನೆಗಳನ್ನು ನಿಜಾಂನು ಹಾಕಿದನು. ಆದರೂ ವಿಮೋಚನಾ ಹೋರಾಟಗಾರರು ಕಲಬುರ್ಗಿಯ ಎಂ.ಎಸ್.ಕೆ.ಮಿಲ್‌ನ ಆವರಣದಲ್ಲಿ ನಾರಾಯಣರಾವ್, ಭೀಮರಾವ್ ಹಾಗೂ ಕಕ್ಕೇರಿ ಹಣಮಂತರಾವ್, ದತ್ತಾತ್ರೇಯ ಅವರಾದಿ ಅವರು ಧ್ವಜಾರೋಹಣ ಮಾಡಿದರು. ಆಗಿನ ಸಂದರ್ಭದಲ್ಲಿ ಕಪಟರಾಳ ಕೃಷ್ಣರಾಯರು, ಬಾವುರಾವ್ ದೇವುಳಗಾಂವಕರ್, ಅಶ್ವಥ್‌ರಾವ್ ವಕೀಲರನ್ನು ನಿಜಾಂ ಪೊಲೀಸ್ ಬಂಧಿಸಿತು. ಸ್ವಾತಂತ್ರ್ಯ ಬಂದ ದಿನದಂದು ನೂತನ ವಿದ್ಯಾಲಯದ ಮೈದಾನದಲ್ಲಿ ಯುವಕರು ಪುಟ್ ಬಾಲ್ ಆಡುವ ನೆಪದಲ್ಲಿ ಸೇರಿ ತ್ರಿವರ್ಣ ಧ್ವಜವನ್ನು ಹಾರಿಸಿದರು. ಈ ಕಾರ್ಯದ ಮುಖಂಡತ್ವವನ್ನು ಅನುರುದ್ಧನ ಮತ್ತಿತ್ತರು ವಹಿಸಿದ್ದರು. ಅನೇಕ ಯುವಕರನ್ನು ನಿಜಾಂ ಪೋಲಿಸರು ಬಂಧಿಸಿ ಲಾಠಿ ಏಟು ಕೊಟ್ಟರು. ಕೆಲವರು ವಂದೇ ಮಾತರಂ ಎಂಬ ಮಂತ್ರವನ್ನು ಹೇಳಿ ಓಡಿಹೋದರು. ಅವರಿಗೆ 'ವಂದೇ ಮಾತರಂ' ಹೇಳುವ ಉದ್ದೇಶದ ಜೊತೆ ಪ್ರಾಣ ಭಯವೂ ಇತ್ತು.

ಅನೇಕ ಯುವಕರು ಸೇರಿ ಕಲಬುರ್ಗಿಯ ಮಹಬೂದ್ ಗುಲಶನ್ ಉದ್ಯಾನವನದ ಬಳಿ ಇದ್ದ ಕಕ್ಕೇರಿ ಹಣಮಂತರಾಯರ ಮನೆಯ ಮುಂದೆ ತ್ರಿವರ್ಣ ರಾಷ್ಟ್ರಧ್ವಜವನ್ನು ಹಾರಿಸಿದರು. ಡಾಕ್ಟರ್ ಚಂದ್ರಕಾಂತ ದೇವುಳಗಾಂವಕರ ಹಾಗೂ ಬಲಭೀಮ ಮುರುಗಕರವರು, ನಗರದ ಕೆರೆಯ ದಂಡೆಯಲ್ಲಿರುವ ಯಲ್ಲಮ್ಮನ ಗುಡಿಯ ಹತ್ತಿರ ನಿಜಾಂನ ವಿರುದ್ಧ ಸತ್ಯಾಗ್ರಹ ಕೈಗೊಂಡರು. ಕಲಬುರ್ಗಿಯ ಬಾವುಸಾಹೇಬ ದೇವುಳಗಾಂವಕರರು ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಕರ್ನಾಟಕ ಭಾಗದ ಕಾರ್ಯದರ್ಶಿಗಳಾಗಿದ್ದರು. ನಿಜಾಂ ಪೊಲೀಸರು ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟಗಾರರನ್ನು ಬಂಧಿಸಿ ಜೈಲಿಗೆ ಹಾಕಿದರು. ರಮಾನಂದ ತೀರ್ಥರನ್ನು ಹೈದರಾಬಾದಿನ ಚಂಚಲ ಗೂಡಾ ಜೈಲಿಗೆ ಹಾಕಿದರು. ಕಲಬುರ್ಗಿಯ ದತ್ತಾತ್ರೇಯ ಅವರಾದಿ, ಜಗನ್ನಾಥರಾವ್ ಚಂಡ್ರಿಕಿ, ಚಂದ್ರಕಾಂತ ಮಹಾಗಾಂವ, ಕಿಶನರಾವ್ ಸತಾಳಕರ್ ಮೊದಲಾದವರನ್ನು ಕಲಬುರ್ಗಿ ಜೈಲಿಗೆ ತಳ್ಳಲಾಯಿತು. ಸ್ವಾತಂತ್ರ್ಯದ ಸಂಭ್ರಮದಲ್ಲಿ ೧೫ ಅಗಸ್ಟ ೧೯೪೭ ರಾತ್ರಿ ಸೋಲಾಪುರದ ಕಡೆಯಿಂದ ಬರುವ ರೈಲಿಗೆ ಸ್ವಾಗತ ಕೋರಲು ಕಲಬುರ್ಗಿ ರೈಲ್ವೆ ನಿಲ್ದಾಣಕ್ಕೆ ಅನೇಕ ಸ್ವಾತಂತ್ರ್ಯ ಹಾಗೂ ವಿಮೋಚನಾ ಹೋರಾಟಗಾರರರು ಧಾವಿಸಿದರು. ರೈಲಿನ ಮೇಲೆ ತ್ರಿವರ್ಣ ಧ್ವಜ ಹಾರಿಸಿಕೊಂಡು ಹೂಗಳಿಂದ ಅಲಂಕರಿಸಿಕೊಂಡು ಸ್ವಾತಂತ್ರ್ಯ ಪ್ರೇಮಿಗಳು ಬರುತ್ತಿದ್ದರು. ವಂದೇ ಮಾತರಂ ಎಂದು ಘೋಷಣೆ

ಕೂಗುತ್ತ ರೈಲು ಕಲಬುರ್ಗಿ ನಿಲ್ದಾಣ ತಲುಪಿತ್ತು. ಆಗ ನಿಜಾಂ ಸರಕಾರ ವಂದೇ ಮಾತರಂ ಘೋಷಣೆ ನಿಲ್ಲಿಸುವಂತೆ ಒತ್ತಾಯ ಮಾಡಿತು. ಲಾಠಿ ಪ್ರಹಾರ ಕೂಡ ಮಾಡಲಾಯಿತು. ಆದರೆ ವಿಮೋಚನಾ ಹೋರಾಟಗಾರರು ಹೆದರದೆ ಭಾರತ್ ಮಾತಾ ಕೀ ಜೈ ಎಂದು ಕೂಗೂತ್ತಾ ರೈಲು ನಿಲ್ದಾಣದಲ್ಲಿ ನುಗ್ಗಿದರು. ಈ ರೀತಿಯಾಗಿ ನಿಜಾಂನ ವಿರುದ್ಧ ಹೋರಾಡಲು ಹೈದರಾಬಾದ್ ಕರ್ನಾಟಕದ ಜನತೆ ಮುಂದಾದರು. ಎಂದು ದಿಗಂಬರರಾವ್ ಕಲ್ಮಣಕರ್‌ರವರು ತಮ್ಮ ಅನುಭವವನ್ನು ವ್ಯಕ್ತಪಡಿಸಿದರು.[೨೯]

## ೨.೭. ರಜಾಕಾರರ ದೌರ್ಜನ್ಯ

ಬ್ರಿಟಿಷರ ವಿರುದ್ಧ ಹೋರಾಡಿ ಸ್ವಾತಂತ್ರ್ಯಗಳಿಸಿದಂತೆ, ಹೈದರಾಬಾದ್ ಪ್ರಾಂತ್ಯದ ಜನತೆ ನಿಜಾಂನ ವಿರುದ್ಧ ಹೋರಾಡಿ ಸ್ವಾತಂತ್ರ್ಯ ಪಡೆಯಲು ಅನೇಕ ಹೋರಾಟ ಮಾಡಬೇಕಾಯಿತು. ಸ್ವಾತಂತ್ರ್ಯ ಭಾರತದ ತ್ರಿವರ್ಣ ಧ್ವಜವನ್ನು ಹೈದರಾಬಾದ್ ನಿಜಾಂನ ಪ್ರಾಂತ್ಯದಲ್ಲಿ ಹಾರಿಸುತ್ತೇವೆ ಎಂದು ವಿಮೋಚನಾ ಹೋರಾಟಗಾರರು ಘೋಷಣೆ ಕೂಗಿದರು. ವಿದ್ಯಾರ್ಥಿಗಳು ಹಾಗೂ ಯುವಕರು, ಬೀದಿಗಿಳಿದು ಚಳುವಳಿ ಮಾಡಲು ಸಿದ್ಧರಾದರು. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಅನೇಕ ವಿಮೋಚನಾ ಹೋರಾಟಗಾರರು ಸತ್ಯಾಗ್ರಹ ಮಾಡಿದರು. ನಿಜಾಂ ಸರಕಾರ ಕೆಲವರನ್ನು ಹಿಡಿದು ಜೈಲುಗಳಲ್ಲಿ ತುಂಬಿದರು. ಪರಿಸ್ಥಿತಿಯ ವಿಕೋಪವನ್ನು ಅರಿತುಕೊಂಡು ಮೀರ್ ಉಸ್ಮಾನ್ ಅಲಿಖಾನ್ ತನ್ನಿಂದ ಜನ್ಮ ಪಡೆದ "ಮಜಲೀಸ್ ಇತ್ತೇಹಾದುಲ್ ಮುಸಲ್ಮೀನ್ " ಎಂಬ ಮತೀಯ ಸಂಘಟನೆಗಳನ್ನು ವಿಮೋಚನಾ ಹೋರಾಟಗಾರರ ಮೇಲೆ ಹೋರಾಡಲು ಬಿಟ್ಟನು. ಅಲ್ಲದೆ ನಿಜಾಂನು ತನ್ನ ಪೊಲೀಸರಿಗೆ ಆತ್ಯಾಚಾರ ಮಾಡಲು ಪೂರ್ಣ ಸ್ವಾತಂತ್ರ್ಯ ಕೊಟ್ಟನು. ಇದರ ನೇತೃತ್ವವನ್ನು ಕಾಸಿಂರಜ್ವಿ ವಹಿಸಿಕೊಂಡಿದ್ದನು. ಈತನು ಮಹಾರಾಷ್ಟ್ರರಾಜ್ಯದ ಲಾತೂರ ಜಿಲ್ಲೆಯ ಒಬ್ಬ ವಕೀಲನಾಗಿದ್ದನು. ಕಾಸಿಂ ರಜ್ವಿ ಮುಸ್ಲಿಂ ಧರ್ಮದ ಏಳಿಗೆಯೆನ್ನೇ ತನ್ನ ಮುಖ್ಯ ಗುರಿಯಾಗಿಸಿ ಕೊಂಡಿದ್ದನು. ರಜ್ವಿಯು ನಿಜಾಂನ ಆಪ್ತನಾಗಿದ್ದುದರಿಂದ ರಜ್ವಿಯ ತಂತ್ರಗಳು ಫಲಿಸುತ್ತಿದ್ದವು. ನಿಜಾಂನ ಸಹಾಯದಿಂದ ರಜಾಕಾರರನ್ನು ಕಾಸೀಮ ರಜ್ವಿ ಬೆಳೆಸಿದ. ರಜಾಕಾರರೆಂದರೆ "ನಿಜಾಂನ ಸ್ವಯಂ ಸೇವಕರೆಂದರ್ಥ" ರಜಾಕಾರರ ಮುಖಂಡನಾದ ಕಾಸಿಂ ರಜ್ವಿ ಅವರಿಗೆ ಲೂಟಿ, ಸುಲಿಗೆ, ದರೋಡೆ, ಅತ್ಯಾಚಾರ ಮುಂತಾದ ಕೆಟ್ಟ ಕಾರ್ಯಗಳನ್ನು ಮಾಡಲು ಅನುಮತಿ ಕೊಟ್ಟಿದ್ದನು. ಹೈದರಾಬಾದ್ ಪ್ರಾಂತ್ಯದ ಜನರನ್ನು ಹೆದರಿಸಿ ನಿಜಾಂನ ವಶದಲ್ಲಿಡಬೇಕೆಂದು ಅವನ ಅಭಿಪ್ರಾಯ ವಾಗಿತ್ತು. ಕಲಬುರ್ಗಿ ಜಿಲ್ಲೆಯ ಭಾಗಗಳಲ್ಲಿ ರಜಾಕಾರರು ಹೆಣ್ಣು ಮಕ್ಕಳ ಮಾನಭಂಗ, ಹಾಗೂ ಆಸ್ತಿ ಕಬಳಿಸುವ ಕಾರ್ಯವನ್ನು ತೀವ್ರಗತಿಯಿಂದ ನಡೆಸುತ್ತಿದ್ದರು. ರಜಾಕಾರರ ವಿರುದ್ಧ ಹೋರಾಡಲು ಕಲಬುರ್ಗಿಯ ಶರಣಗೌಡಪಾಟೀಲ್‌ಇನಾಂದಾರ್, ಜಗನ್ನಾಥರಾವ್ ಚಂಡ್ರಿಕಿ, ಗುರುಭೀಮರಾವ್

ಪಾಟೀಲ್, ಡಿ.ಬಿ.ಕಲ್ಮಣಕರ್ ಮುಂತಾದ ವಿಮೋಚನಾ ಹೋರಾಟಗಾರರು ಮುಂದಾದರು. ಬಹದ್ದೂರ್ ಯಾರ್ ಜಂಗ್ ಹಾಗೂ ಕಾಸಿಂ ರಜ್ವಿ ಇಬ್ಬರೂ ಸೇರಿ ಶಾಂತಿಗಿಂತ ಧರ್ಮ ಮುಖ್ಯ. ಧರ್ಮವನ್ನು ಉಳಿಸಲು ಹಿಂಸೆಗೂ ಹೆದರಬಾರದೆಂದು ಮುಸ್ಲಿಂ ಜನಾಂಗಕ್ಕೆ ಬೋಧಿಸಿ ಕೋಮುಭಾವನೆಗಳನ್ನು ಪ್ರಚೋದಿಸುತ್ತಿದ್ದರು. ಅನೇಕ ಕೆಳವರ್ಗದವರನ್ನು ಹೆದರಿಸಿ ಹಾಗೂ ಆಶೆಗಳನ್ನು ತೋರಿಸಿ ಮುಸ್ಲಿಂ ಧರ್ಮಕ್ಕೆ ಮಂತಾಂತರಗೊಳಿಸುತ್ತಿದ್ದರು ರಜಾಕಾರರು ಹಳ್ಳಿ ಹಳ್ಳಿಗಳಲ್ಲಿ ಹೋಗಿ ಗ್ರಾಮದ ಜನರ ಮೇಲೆ ದಬ್ಬಾಳಿಕೆ ಮಾಡಿ ದವಸ ಧಾನ್ಯಗಳನ್ನು ಕಸಿದುಕೊಂಡು ಬರುತ್ತಿದ್ದರು. ಇಂತಹ ಬರ್ಬರ ಹತ್ಯೆಗಳನ್ನು ತಡೆಯಲು ಕಲಬುರ್ಗಿಯಲ್ಲಿ ಯುವಕರ ತಂಡಗಳು ಹುಟ್ಟಿಕೊಂಡವು. ವಿಮೋಚನಾ ಹೋರಾಟದಲ್ಲಿ ಹೋರಾಡಿದ ಕಲಬುರ್ಗಿ ಜಿಲ್ಲೆಯ ಯೋಧರಾದ ದತ್ತಾತ್ರೇಯ ಅವರಾದಿ, ಭೈರಪ್ಪ ಪಾಟೀಲ್ ಭೂಸನೂರ, ಗುರುಭೀಮರಾವ್ ಪಾಟೀಲ್, ಮಲ್ಲಕಾಜಪ್ಪ ಜೀವೂರ್, ಅಣ್ಣಾರಾವ್ ಪಾಟೀಲ್, ವಿದ್ಯಾಧರ ಗುರೂಜಿ, ಹಣಮಂತರಾವ್ ಕಕ್ಕೇರಿ, ಚಂದ್ರಕಾಂತ ಪಾಟೀಲ್, ಡಿ.ಬಿ.ಕಲ್ಮಣಕರ್, ಜಗನ್ನಾಥರಾವ್ ಚಂಡ್ರಿಕಿ, ವಿ.ಪಿ. ದೇವುಳಗಾಂವಕರ್, ಶರಣಗೌಡ ಪಾಟೀಲ್ ಇನಾಂದರ್, ಚನ್ನಬಸಪ್ಪ ಕುಳಗೇರಿ, ಕುಸುಮಾಕರ ದೇಸಾಯಿ, ವಿಶ್ವನಾಥರೆಡ್ಡಿ ಮುದ್ನಾಳ, ಚಂದ್ರಶೇಖರ ಪಾಟೀಲ್, ರಾಜಾವೆಂಕಟಪ್ಪ ನಾಯಕ, ಬಸಪ್ಪದರ್ಜಿ, ತಿಮ್ಮಯ್ಯ ದರ್ಬಾರ, ನಾಗಣ್ಣ ವಕೀಲರು, ಹನುಮನಗೌಡಾ ಮುಂತಾದವರು ರಜಾಕಾರ ಹಾಗೂ ನಿಜಾಂ ಪೊಲೀಸರ ವಿರುದ್ಧ ಹೋರಾಡಿ ಕಲಬುರ್ಗಿ ಜಿಲ್ಲೆಯ ಜನರನ್ನು ರಕ್ಷಿಸಿದರು. ರಜ್ವಿಯ ರಜಾಕಾರರನ್ನು ಓಡಿಸಲು ಹಾಗೂ ಗ್ರಾಮಗಳ ಜನರನ್ನು ಕಾಪಾಡಲು ಕಲುಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟಗಾರರು ಗಡಿ ಶಿಬಿರಗಳನ್ನು ಸ್ಥಾಪಿಸಿದರು. ಮೈಂದರ್ಗೀ ಶಿಬಿರ, ಸಿಂದಗಿಶಿಬಿರ, ಗೌಡಗಾಂವ ಶಿಬಿರ, ವಾಗಧರಿಶಿಬಿರ, ಧುದನಿ ಶಿಬಿರ, ಕೇಸರಾಜವಳಗಾ ಶಿಬಿರ ಮುಂತಾದ ಪ್ರಮುಖ ಶಿಬಿರಗಳನ್ನು ಸ್ಥಾಪಿಸಿದರು. ಹಾಗೂ ಕೆಲ ಉಪಶಿಬಿರಗಳನ್ನು ಸಹ ಸಂಘಟಿಸಿದರು.

ರಜಾಕಾರರು ಭಾರತ ಸರಕಾರದೊಡನೆ ಹೋರಾಡಿ, ದೆಹಲಿಯನ್ನು ಗೆದ್ದು ಕೆಂಪುಕೋಟೆಯ ಮೇಲೆ, ಅಸಫಿಯಾ ಧ್ವಜವನ್ನು ಹಾರಿಸುತ್ತೇವೆ ಎಂದು ಭಾಷಣ ಮಾಡಿದರು. ಇದರಿಂದ ಪ್ರೇರಣೆಗೊಂಡ ಗ್ರಾಮಗಳಲ್ಲಿ ಮುಸ್ಲಿಂ ನಾಯಕರು ಹೈದರಾಬಾದ್ ಕರ್ನಾಟಕದ ಕಲಬುರ್ಗಿ ಭಾಗಗಳ ಜನತೆ ಮೇಲೆ "ಮಾರೋ ಕಾಟೋ ಬಾಟೋ" ಎಂಬ ಘೋಷಣೆ ಮಾಡಿಕೊಂಡು ಕಲಬುರ್ಗಿ ಜನತೆಯ ಮೇಲೆ ಅತ್ಯಾಚಾರ, ಕೊಲೆ, ಸುಲಿಗೆ, ದರೋಡೆ ಕೈಗೊಂಡರು. ಕಲಬುರ್ಗಿ ಜಿಲ್ಲೆಯ ಸುರಪುರ, ಕುಳಗೇರಿ, ಗೌಡಗಾಂವ, ರೇವೂರ, ನಿಂಬರ್ಗಾ ಲಾಡ್ ಚಿಂಚೋಳ, ನಂದರ್ಗಾ, ಜೀವರ್ಗಿ, ಭೂಸನೂರ, ಮಾದನ್ ಹಿಪ್ಪರಗಾ, ಹಿರೋಳಿ, ನಾಗುರೂ, ಚಿಂಚೋಳಿ, ತಡಕಲ್,

ಸಿನ್ನೂರು, ಅಜುಣಗಿ, ದಿಗ್ಗಸಂಗ, ಮಾಶಾಳ, ಗವೂರ್ ಮುಂತಾದ ಗ್ರಾಮಗಳ ಮೇಲೆ ರಜಾಕಾರರು ಹಲ್ಲೆ ಮಾಡಿರು. ಗ್ರಾಮಗಳಿಗೆ ಹೋಗಿ ಧನ, ಕರು, ಕೋಳಿ, ಕುರಿ ಹಾಗೂ ಹಣ, ಒಡವೆಗಳನ್ನು ಕಸಿದುಕೊಂಡು ಹೋಗುತ್ತಿದ್ದರು. ಒಂದೆಡೆ ಮಾನಸಿಕ ನೆಮ್ಮದಿಯೂ ಇಲ್ಲ. ಇನ್ನೊಂದೆಡೆ ಇದ್ದ ಆಸ್ತಿ, ಪಾಸ್ತಿಗಳನ್ನು ದರೋಡೆ ಮಾಡಿ ಜೀವನಕ್ಕೆ ತೊಂದರೆ ಕೊಡುತ್ತಿದ್ದರು. ಇವರು ಕೊಡುವ ತೊಂದರೆಗಳನ್ನು ಅನುಭವಿಸಿದಂತಹ ಒಂದು ಘಟನೆಯನ್ನು ಹೇಳಬೇಕೆಂದರೆ ಕಲಬುರ್ಗಿ ಜಿಲ್ಲೆಯ ಕುಳಗೇರಿ ಗ್ರಾಮವು ರಜಾಕಾರರ ದೌರ್ಜನ್ಯಕ್ಕೆ ತುತ್ತಾದ ಗ್ರಾಮವಾಗಿದೆ. ಕುಳಗೇರಿ ಗ್ರಾಮದ ಜನರು ಜಾತ್ಯಾತೀತ ಗ್ರಾಮವಾಗಿದ್ದು, ವಿಮೋಚನಾ ಹೋರಾಟದಲ್ಲಿ ಮಹತ್ವದ ಪಾತ್ರವಹಿಸಿದೆ. ಹಿಂದೂ-ಮುಸ್ಲಿಂ ಎನ್ನುವ ಭೇದವಿಲ್ಲದೆ ಶಾಂತಿಯಿಂದ ಈ ಗ್ರಾಮದ ಜನರಿದ್ದರು. ಈ ಗ್ರಾಮವು ಹೋರಾಟ ದಲ್ಲಿ ಮಹತ್ವದ ಪಾತ್ರವಹಿಸಿದೆ. ಈ ಗ್ರಾಮದ ಜನರು ಮಹಬೂಬ್ ಪಟೇಲ್ ಎಂಬ ಕುಳಗೇರಿ ಗ್ರಾಮದ ಪೊಲೀ ಗೌಡನ ಕುತಂತ್ರಕ್ಕೆ ಬಲಿಯಾಯಿತು. ಹಿಂದೂಗಳು ನಮ್ಮ ಮುಸ್ಲಿಂ ಜನತೆಯ ಮೇಲೆ ದೌರ್ಜನ್ಯ ಮಾಡುತ್ತಿದ್ದಾರೆ ಎಂದು ಸುಳ್ಳು ಹೇಳಿ ರಜಾಕಾರರನ್ನು ಕುಳಗೇರಿ ಗ್ರಾಮಕ್ಕೆ ಆಹ್ವಾನಿಸಿದ. ಮುಸ್ಲಿಂರ ಮೇಲೆ ಆತ್ಯಾಚಾರ ಎಸಗಿದೆ ಎಂದು ಅಪರಾಧ ಹೊರೆಸಿ ದಂಡೆಪ್ಪ ಬಸಲಿಂಗಪ್ಪನವರನ್ನು ಹಾಗೂ ಗ್ರಾಮದ ೨೦ ಪ್ರಮುಖರನ್ನು ನಿಜಾಂ ಪೊಲೀಸರು ಬಂಧಿಸಿದರು. ರಜಾಕಾರರು ಗ್ರಾಮದಲ್ಲಿದ್ದ ಮನೆಗಳನ್ನು ಸುಟ್ಟು ಹಾಕಿದರು. ಕೊಲೆ, ಲಾಟಿಪ್ರವಾಹ, ಮಹಿಳೆಯರ ಮಾನಭಂಗ, ಬೆಳೆಗಳ ನಾಶ ಹಾಗೂ ಸುಲಿಗೆಗಳನ್ನು ಮಾಡಿದರು. ಈ ಕೃತ್ಯದಿಂದ ಹೆದರಿ ಕುಳಿಗೇರಿ ಗ್ರಾಮದ ಜನತೆ ಬೇರೆ ಊರುಗಳಿಗೆ ವಲಸೆ ಹೋದರು. ಇದನ್ನು ಕಂಡು ಚನ್ನಬಸಪ್ಪ ಕುಳಗೇರಿಯವರು ಕೆಲ ಯುವಕರನ್ನು ಸಂಘಟಿಸಿ, ರಜಾಕಾರರ ವಿರುದ್ಧ ಹೋರಾಡಿದರು. ಚನ್ನಬಸಪ್ಪ ಹಾಗೂ ಹೋರಾಟಗಾರರು ರಜಾಕಾರರನ್ನು ಹಿಡಿದು ಹೊಡೆದರು. ಈ ಸೇಡಿನಿಂದ ರಜಾಕಾರರು ಚನ್ನಬಸಪ್ಪನವರನ್ನು ಒಪ್ಪಿಸುವವರೆಗೆ ಈ ಗ್ರಾಮದ ಮೇಲೆ ಯಾವಾಗಲೂ ದಾಳಿ ಮಾಡುತ್ತೇವೆ ಎಂದು ಹೆದರಿಸಿದರು. ಒಂದು ದಿನ ಚನ್ನಬಸಪ್ಪ ಹಾಗೂ ಬಸವಂತರಾಯ ಗುರುಮಿಠಕಲ್ ಅವರೊಡನೆ ಸುಮಾರು ೨೫ ಜನಯುವಕರು ಒಂದು ತಂಡ ರಚಿಸಿಕೊಂಡು ರಜಾಕಾರರ ಮೇಲೆ ದಾಳಿ ಮಾಡಿದರು. ಹಾಡು ಹಾಗಲೇ ನಡೆದ ಈ ಹೋರಾಟದಲ್ಲಿ ೮ ಜನ ರಜಾಕಾರರು ಹೆಣವಾದರು. ಕುಳಗೇರಿ ಗ್ರಾಮದ ಜನತೆ ಹಿಂತಿರುಗಿ ಮತ್ತೆ ತಮ್ಮ ಜೀವನ ಪ್ರಾರಂಭಿಸಿದರು. ರಜಾಕಾರರ ಕೆಟ್ಟದೃಷ್ಟಿ ಆ ಗ್ರಾಮದ ಮೇಲೆ ಬಿಳದ ಹಾಗೇ ಚನ್ನಬಸಪ್ಪ ಹಾಗೂ ವಿಮೋಚನಾ ಹೋರಾಟಗಾರರು ನೋಡಿಕೊಂಡರು. ಚನ್ನಬಸಪ್ಪ ಕುಳಗೇರಿಯವರು ಹಾಗೂ ಅವರ ಜೊತೆಗಾರರು ಹೋರಾಟದ ಅನುಭವಗಳನ್ನು ಹೇಳಿಕೊಳ್ಳುತ್ತಾರೆ[೬]

ಕಲಬುರ್ಗಿ ಜಿಲ್ಲಯ ಜೀವರ್ಗಿ, ಸುರಪುರ, ಶಾಹಪುರ, ಮೊದಲಾದ ಕಡೆ ತೀವ್ರಗತಿಯ ಹೋರಾಟಗಳು ನಡೆದು ರಜಾಕಾರರ ದಬ್ಬಾಳಿಕೆಯನ್ನು ಹತ್ತಿಕ್ಕಲು ಪಣತೊಟ್ಟರು. ಸರದಾರ ಶರಣಗೌಡ ಪಾಟೀಲರಂತೂ ತಮ್ಮ ಜೀವನವನ್ನು ರಜಾಕಾರರ ವಿರುದ್ಧ ಹೋರಾಡಲು ಮೀಸಲಿಟ್ಟಿದ್ದರು. ಅವರ ಬಂದೂಕಿಗೆ ಅನೇಕ ರಜಾಕಾರರು ಬಲಿಯಾದರಲ್ಲದೆ. ನಿಜಾಂ ಪೊಲೀಸ್‌ರ ಕೇಂದ್ರಗಳನ್ನು ನಾಶಪಡಿಸಿ ತ್ರಿವರ್ಣ ಧ್ವಜವನ್ನು ಹಾರಿಸಿದರು.

ಪವಿತ್ರಯಾತ್ರ ಸ್ಥಳವಾದ ದತ್ತಾತ್ರೇಯ ದೇವಲಗಾಣಗಾಪುರಕ್ಕೆ ಬಂದ ಭಕ್ತರನ್ನು ರಜಾಕಾರರು ತೊಂದರೆ ಪಡಿಸುತ್ತಿದ್ದರು ಇದನ್ನರಿತ ಶರಣಗೌಡ ಹಾಗೂ ಭೈರಪ್ಪ ಪಾಟೀಲ್ ಭೂಸನೂರರವರು ಕೆಲ ಯುವಕರನ್ನು ಸೇರಿಸಿ ರಜಾಕಾರರನ್ನು ಹೊಡೆದು ಓಡಿಸಿದರು. ಅವರು ನಿಂಬರಗಾ ಪೊಲೀಸ್ ಠಾಣೆಯನ್ನು ಬೆಂಕಿಹಚ್ಚಿ ಸುಟ್ಟುಬಿಟ್ಟರು. ಹೆದರಿದ ರಜಾಕಾರರು ಗಾಣಗಾಪುರದ ಗ್ರಾಮವನ್ನು ಬಿಟ್ಟು ಬೇರೆ ಕಡೆ ಹೋದರು. ಬರುವ ಭಕ್ತರಿಗೆ ಸುಗಮ ದಾರಿಯನ್ನು ಮಾಡಿಕೊಟ್ಟರು. ಇವರ ಧೈರ್ಯ ಹಾಗೂ ಸಾಹಸಗಳನ್ನು ನೋಡಿ ನಿಜಾಂನು ಶರಣಗೌಡ ಪಾಟೀಲರನ್ನು ಕೊಲ್ಲುವ ಸಂಚು ಮಾಡಿದನು. ಶರಣಗೌಡ ಪಾಟೀಲರನ್ನು ಜೀವಂತ ಹಿಡಿದು ಕೊಟ್ಟವರಿಗೆ ಮೂವತ್ತು ಸಾವಿರ ರೂಪಾಯಿಗಳು ಹಾಗೂ ಮೃತದೇಹವನ್ನು ಕೊಟ್ಟರೆ ಹತ್ತು ಸಾವಿರ ರೂಪಾಯಿ ಬಹುಮಾನವೆಂದು ನಿಜಾಂನು ಘೋಷಿಸಿದನು. ಅನೇಕ ಸಲ ಶರಣಗೌಡ ಪಾಟೀಲರು ಪ್ರಾಣಾಪಾಯದಿಂದ ಪಾರಾದರು.

ಕಲಬುರ್ಗಿ ಜಿಲ್ಲೆಯ ಸುರಪುರದ ಜನತೆ ಸ್ವಾತಂತ್ರ್ಯದ ಸಂತೋಷ ಹಂಚಿಕೊಳ್ಳುತ್ತಿದ್ದರು. ಅನೇಕ ಯುವಕರು ತ್ರಿವರ್ಣ ಧ್ವಜದ ಮೆರವಣಿಗೆಯನ್ನು ಮುಖ್ಯ ಬೀದಿಗಳಲ್ಲಿ ನಡೆಸಿದರು. ಬಸಪ್ಪದರ್ಜೆ ಎಂಬುವವರು ಒಂದೇ ದಿನದಲ್ಲಿ ೧೧೫ ಧ್ವಜಗಳನ್ನು ಹೊಲಿದು ವಿಮೋಚನಾ ಹೋರಾಟಗಾರರಿಗೆ ಕೊಟ್ಟರು. ಸುರಪುರದ ಜನರಲ್ಲಿ ದೇಶಾಭಿಮಾನ ಹೆಚ್ಚಿಸುವಲ್ಲಿ ಹೋರಾಡಿದ ನಾಯಕರಾದ ಶಿವನಾರಾಯಣ ಸಾಹುಕಾರ, ಮಾಧವರಾವ್ ಬಾಸೂತಕರ್, ಲಚಮಪ್ಪ ಸಂನ್ಯಾಸಿ, ತಳಜಿ ರಾಮವಕೀಲ್, ಗೋವಿಂದಪ್ಪ, ಪ್ರದಾನಪ್ಪ, ವಿರೋಜಿ, ವೆಂಕೋಬರಾವ್ ಪದಕಿ, ಮುಂತಾದ ಹಿರಿಯ ನಾಯಕರು ಮುಂದಾದರು. ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಲು ಪ್ರೋತ್ಸಾಹಿಸಿದರು. ರಜಾಕಾರರ ವಿರುದ್ಧ ಸತತವಾಗಿ ಹೋರಾಡಿದ ಪಿ.ಕೃಷ್ಣಮಾಚಾರ, ಮಾರ್ತಾಂಡರಾವ್, ರಾಮರಾವ್ ಹೇಜೀಬ್, ಗೋಪಾಲರಾವ್ ಆದೋನಿ ಮುಂತಾದವರು ರಜಾಕಾರರ ಅನೇಕ ಕಚೇರಿಗಳನ್ನು ನಾಶಮಾಡಿದರು. ರಾಜಾ ವೆಂಕಟಪ್ಪನಾಯಕ ತಾಳಿಕೋಟೆಯ ಶಿಬಿರಕ್ಕೆ ಮುಖಂಡರಾಗಿದ್ದರು. ಅವರ ಧೈರ್ಯ, ಸಾಹಸ, ಚಾಣಾಕ್ಷತೆ, ಗಮನಾರ್ಹವಾದದ್ದು. ರಾಜಾವೆಂಕಟಪ್ಪ ನಾಯಕರು ಗಡಿಶಿಬಿರಗಳಿಗೆ ಧನ ಹಾಗೂ ಆಹಾರದ ಸರಬರಾಜು ಮಾಡುತ್ತಿದ್ದರು. ವಿಮೋಚನಾ ಹೋರಾಟಗಾರರಿಗೆ

ಯಾವುದೇ ತೊಂದರೆ ಇಲ್ಲದ ಹಾಗೆ ನೋಡಿಕೊಳ್ಳುತ್ತಿದ್ದರು. ಒಂದು ದಿನ ರಜಾಕಾರರಿಗೂ ಮತ್ತು ಗರಟಗಿಯ ಮಹಾಂತಪ್ಪ ಅಚ್ಚಪ್ಪಗೌಡರು, ಗಣಪತಿರಾವ್, ರಾಜನ್ ಕೊಳ್ಳೂರ್ ವಿರುಪಾಕ್ಷಪ್ಪರ ಮಧ್ಯ ದೊಡ್ಡ ಹೋರಾಟ ನಡೆಯಿತು. ಈ ಹೋರಾಟದಲ್ಲಿ ರಾಜನಕೊಳ್ಳೂರರಿನ ವಿರುಪಾಕ್ಷಪ್ಪನವರು ಹುತಾತ್ಮರಾದರು. ರಜಾಕಾರರ ಪಡೆಯಲ್ಲಿ ಆರು ಜನರು ಪ್ರಾಣಕಳೆದುಕೊಂಡರು. ನಿಜಾಂ ಪೋಲಿಸರು ಹಾಗೂ ಸುರಪುರದ ಪ್ರಮುಖ ರಜಾಕಾರರ ನಾಯಕರು ಗಾಳಿಯಲ್ಲಿ ಗುಂಡು ಹಾರಿಸಿ ಜನತೆಯನ್ನು ಹೆದರಿಸಿ ರಜಾಕಾರರ ಮೃತದೇಹಗಳ ಮೇಲೆ ಹೂಹಾರವನ್ನು ಹಾಕಿದರು. ಹೀಗೆ ಅನೇಕ ಭಾಗಗಳಲ್ಲಿ ರಜಾಕಾರರಿಗೂ ಹಾಗೂ ಹೈದರಾಬಾದ್ ಕರ್ನಾಟಕದ ವಿಮೋಚನಾ ಹೋರಾಟಗಾರರಿಗೂ ದೊಡ್ಡ ಹೋರಾಟವೇ ನಡೆಯಿತು. ಈ ಕ್ರೂರ ಕೃತ್ಯಗಳನ್ನು ನೋಡಿ ಹೈದರಾಬಾದ್ ಭಾಗಗಳಲ್ಲಿ ಜನರ ವೇದನೆ ಹಂಚಿಕೊಳ್ಳಲು ಭಾರತ ಸರಕಾರ ತೀರ್ಮಾನಿಸಿತು.

ಆಳಂದ ತಾಲ್ಲೂಕಿನ ಲಾಡ್ ಚಿಂಚೋಳಿಯಲ್ಲಿ ರಜಾಕಾರರ ಹಾವಳಿ ಹೆಚ್ಚಾಗಿತ್ತು. ಆ ಗ್ರಾಮದ ಜನತೆಗೆ ನೆಮ್ಮದಿಯ ನಿದ್ದೆ ಮಾಡಲು ರಜಾಕಾರರು ಬಿಡುತ್ತಿರಲಿಲ್ಲ. ರಾತ್ರಿ ಊರಿನೊಳಗೆ ನುಗ್ಗಿ ಹೆಣ್ಣು ಮಕ್ಕಳನ್ನು ಹೆದರಿಸಿ ಕುರಿ-ಕೋಳಿಗಳನ್ನು ಒಯ್ಯುತ್ತಿದ್ದರು. ಇದು ಕಾಲಾನಂತರ ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ ಮಾಡುವವರೆಗೂ ಸಾಗಿತು. ರಜಾಕಾರರ ಪುಂಡುತನವನ್ನು ಕಂಡುಬೇಸತ್ತ ಜನರು ರಜಾಕಾರರ ಹಾಗೂ ನಿಜಾಂ ಪೊಲೀಸ್ ವಿರುದ್ಧ ತಿರುಗಿ ನಿಂತರು. ಕುದುರೆಗಳ ಮೇಲೆ ಕುಳಿತು ಕೈಯಲ್ಲಿ ಭರ್ತಿ, ಖಡ್ಗ, ಬಂದೂಕುಗಳನ್ನು ಹಿಡಿದುಕೊಂಡು ರಜಾಕಾರರು ಗ್ರಾಮ ಪ್ರವೇಶಿಸುತ್ತಿದ್ದರು. ಊರು ಜನತೆ ಧೈರ್ಯದಿಂದ ರಜಾಕಾರರ ಮೇಲೆ ದಾಳಿ ಮಾಡುತ್ತಿದ್ದರು. ಹೆಣ್ಣು ಮಕ್ಕಳು, ಮುದುಕರು, ಹಾಗೂ ಯುವಕರು ಸೇರಿ ರಜಾಕಾರರ ಕಣ್ಣುಗಳ ಮೇಲೆ ಕಾರಪುಡಿಯನ್ನು ಹಾಕಿ ಹೊಡೆದರು. ಅವರಲ್ಲಿ ಇಬ್ಬರು ರಜಾಕಾರರು ಸತ್ತು ಹೋದರು. ಕೆಲ ರಜಾಕಾರರು ಹೆದರಿ ಓಡಿಹೋದರು. ಅವಮಾನಕೊಳ್ಳಗಾದ ರಜಾಕಾರರು ಲಾಡ್ ಚಿಂಚೋಳಿಯ ಜನರ ಮೇಲೆ ಸೇಡು ತೀರಿಸಿಕೊಳ್ಳಲು ಹೊಂಚುಹಾಕಿದರು. ಕೆಲದಿನಗಳ ಮೇಲೆ ರಜಾಕಾರರು ಮಾರು ವೇಷ ಹಾಕಿಕೊಂಡು ಹೊಲದಲ್ಲಿ ಕೆಲಸ ಮಾಡುತ್ತಿದ್ದ ಜನರ ಮೇಲೆ ದಾಳಿಮಾಡಿ ೧೮ ಜನರನ್ನು ಡೋಗಿ ಭನದಲ್ಲಿ ಸಾಮೂಹಿಕ ಹತ್ಯೆ ಮಾಡಿದರು. ನಿಶಸ್ತ್ರರಾದ ಜನತೆ ರಜಾಕಾರರ ಕ್ರೂರ ವರ್ತನೆಗೆ ತುತ್ತಾದರು.

## ೨.೮. ಪೊಲೀಸ್ ಕಾರ್ಯಾಚರಣೆ

ಭಾರತದ ಮೊದಲ ಗೃಹಮಂತ್ರಿಯಾಗಿದ್ದ ಸರದಾರ ವಲ್ಲಭಭಾಯಿಪಟೇಲರು ನಿಜಾಂನಿಗೆ ಭಾರತ ಒಕ್ಕೂಟಕ್ಕೆ ಸೇರಲು ಆದೇಶಿಸಿದರು. ಆದರೆ ಹೈದರಬಾದ್ ನಿಜಾಂನಾದ ಮೀರ್ ಉಸ್ಮಾನ್ ಅಲಿಖಾನ್ ಹಾಗೂ ನಿಜಾಂನ ಸಂಸ್ಥಾನದ ಪ್ರಧಾನ ಮಂತ್ರಿಯಾದ ಲಾಯಕ್ ಅಲಿ ಹಾಗೂ ಗೃಹ

ಮಂತ್ರಿ ನವಾಬ ಮೋಹಿನ್ ಜಂಗನು ನಿರಾಕರಿಸಿದರು. ಈ ವಿಷಯ ತಿಳಿದ ರಜಾಕಾರರ ಮುಖಂಡನಾದ ಕಾಸಿಂ ರಜ್ವಿಗೆ ಮತ್ತಷ್ಟು ಧೈರ್ಯ ಬಂದಂತಾಯಿತು. ಕೊಲೆ, ಸುಲಿಗೆ, ಅತ್ಯಾಚಾರ, ಕ್ರೂರನೀತಿಗಳು ಹೆಚ್ಚಾಗ ತೊಡಗಿದವು. ಇದನ್ನು ತಿಳಿದ ಸರದಾರ ವಲ್ಲಭಬಾಯಿ ಪಟೇಲರ ಖೇದಗೊಂಡರು, ಉದ್ರಿಕ್ತರಾದರು. "ಹೈದರಾಬಾದ್ ಪ್ರಾಂತ್ಯದ ಪರಿಸ್ಥಿತಿಯನ್ನು ಕಂಡು ಪಟೇಲರು ತಕ್ಷಣವೇ ೧೦.೯.೧೯೪೮ರಂದು ಸಭೆ ಸೇರಿ ಭಾರತ ಸರಕಾರದ ಸದಸ್ಯರೊಡನೆ ಮಾತುಕತೆಗಳನ್ನು ನಡೆಸಿ "ಪೊಲೀಸ್ ಆಕ್ಷ್ಯನ್"ಗೆ ಒಪ್ಪಿಸಿದರು. ೧೩.೯.೧೯೪೮ರಂದು ಆದೇಶವನ್ನು ಹೊರಗೆ ತಂದರು.[೧೮] ಆಗ ಭಾರತದ ಮೇಜರ್ ಜನರಲ್ ಜೆ.ಎನ್ .ಚೌಧರಿ ಹಾಗೂ ಲೇ.ಜಿ.ರಾಜೇಂದ್ರ ಸಿನ್ಹ್ ಅವರಿಗೆ ಹೈದರಾಬಾದ್ ಸಂಸ್ಥಾನದ ಮೇಲೆ ದಾಳಿ ಮಾಡಲು ಅಧಿಕಾರವನ್ನು ಕೊಟ್ಟರು. ಗಡಿಶಿಬಿರಗಳ ಸಹಕಾರದೊಂದಿಗೆ ಭಾರತ ಸೈನ್ಯ ನಿಜಾಂನ ಸಂಸ್ಥಾನವನ್ನು ನುಸುಳಿತು. ಸತತವಾಗಿ ಮೂರು ದಿನಗಳವರೆಗೆ ನಿಜಾಂ ಪೊಲೀಸರಿಗೂ ಹಾಗೂ ಭಾರತದ ಸೈನ್ಯಕ್ಕೂ ಹೋರಾಟ ನಡೆಯಿತು. ಹೋರಾಟದಲ್ಲಿ ಅನೇಕ ಹೈದರಾಬಾದ್ ಪ್ರಾಂತ್ಯದ ಭಾಗಗಳು ಭಾರತದ ಸೈನ್ಯದ ವಶವಾದವು. "ಸೋಲಿನ ಲಕ್ಷಣಗಳನ್ನು ಕಂಡ ನಿಜಾಂ ದಂಡನಾಯಕ ಮೇ.ಜಿ.ಎಲ್. ಎಂಡ್ರೂಸ್ ೧೮.೯.೧೯೪೮ರಂದು ಸಯಂಕಾಲ ೫ ಗಂಟೆಗೆ ಶರಣಾದ. ನಿಜಾಂ ಪ್ರಾಂತ್ಯದ ಪ್ರಧಾನ ಮಂತ್ರಿಯಾದ ಲಾಯಕ್ ಅಲಿಖಾನ್ ಅಲಿ ಹಾಗೂ ನವಾಬ ಮೀರ್ ಉಸ್ಮಾನ್ ಅಲಿಖಾನ್ ರು ಸೋಲಿನ ಪತ್ರಕ್ಕೆ ಸಹಿ ಹಾಕಿದರು.[೧೯] ಹೈದರಾಬಾದ್ ಪ್ರಾಂತ್ಯ ಭಾರತದ ಒಕ್ಕೂಟಕ್ಕೆ ಸೇರ್ಪಡೆಗೊಂಡಿತು. ಹೈದರಾಬಾದ್ ಭಾಗದ ಜನತೆ ಸಂತೋಷ-ಸಂಭ್ರಮದಲ್ಲಿ ಸ್ವಾತಂತ್ರ್ಯ ಆಚರಿಸಿದರು.

ರಜಾಕಾರರ ಕೊಲೆ, ಸುಲಿಗೆ, ಅತ್ಯಾಚಾರ, ಹಾಗೂ ನಿಜಾಂನ ದಬ್ಬಾಳಿಕೆಯನ್ನು ಸಹಿಸದೆ ಅವರ ವಿರುದ್ಧ ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟಗಾರರು ಹೋರಾಡಿದರು. ಸುರಪುರ, ಕುಳಗೇರಿ, ಲಾಡ್ ಚಿಂಚೋಳಿ, ಗ್ರಾಮಗಳಂತೆ ಎಷ್ಟೊ ಗ್ರಾಮಗಳು ರಜಾಕಾರರ ಹಾವಳಿಗೆ ತುತ್ತಾಗಿದ್ದವು. ಸ್ವಾತಂತ್ರ್ಯ ಸಿಕ್ಕು ೫೩ ವರ್ಷಗಳು ಕಳೆದರೂ ಈ ಭಾಗದ ಜನರ ಮನಸ್ಸಿನ ಮೇಲೆ ಆದುರ್ದಿನಗಳು ಮರೆಯಲಾರದವಾಗಿವೆ. ಕೆಲಹಳ್ಳಿಗಳಲ್ಲಿ ಜನರನ್ನು ರಜಾಕಾರರ ದಬ್ಬಾಳಿಕೆಗಳ ಬಗ್ಗೆ ಕೇಳಿದರೆ ಹೆದರಿಕೆಯಿಂದ ಯಾವುದೇ ಮಾಹಿತಿಯನ್ನು ಕೊಡುವುದಿಲ್ಲ. ಅಂತಹ ಮುಗ್ಧ ಜನರ ಮೇಲೆ ಅತ್ಯಾಚಾರ ಎಸಗಿದ ರಜಾಕಾರರು ಹಾಗೂ ನಿಜಾಂನ ಪೊಲೀಸ್ ವಿರುದ್ಧ ವಿಮೋಚನೆಗಾಗಿ ಹೋರಾಡಿದ ನಾಯಕರಾದ ಶರಣಗೌಡ ಪಾಟೀಲ್, ಅಣ್ಣಾರಾವ್ ಪಾಟೀಲ್, ಗುರುಭೀಮರಾವ್ ಪಾಟೀಲ್, ಡಿ.ಬಿ.ಕಲ್ಮಣಕರ್, ಬಸಪ್ಪ ದರ್ಜೆ, ಚನ್ನಬಸಪ್ಪ ಕುಳಗೇರಿ, ಜಗನ್ನಾಥರಾವ್ ಚಂಡ್ರಿಕಿ, ಮುಂತಾದ ವಿಮೋಚನಾ ಹೋರಾಟಗಾರರನ್ನು ನಾವು ಇಲ್ಲಿ ಸ್ಮರಿಸಬಹುದು.

**ಅಡಿಟಿಪ್ಪಣಿ**

೧. ಶಿವರುದ್ರಸ್ವಾಮಿ(ಲೇ), **ಆಧುನಿಕಕ ಭಾರತದ ಇತಿಹಾಸ,** ೨೦೦೧, ಪು.೨೪೪

೨. ಭಾಲೇರಾವ್(ಲೇ), **ಹೈದರಾಬಾದ್ ಸ್ವಾತಂತ್ರ್ಯ ಸಂಗ್ರಾಮ ಆಣಿ ಮರಾಠವಾಡ,** ಪು.೧೬೬

೩. ಗೋಪಾಲರಾವ್ ಹೇಜೀಬ್(ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ,** ೨೦೦೧ ಪು.೩೫

೪. ಅಮರೇಶ ನುಗಡೋಣಿ(ಲೇ), **ರಾಯಚೂರು ಜಿಲ್ಲೆಯ ಹೈದರಾಬಾದ್ ವಿಮೋಚನಾ ಚಳುವಳಿ** ೨೦೦೦, ಪು.೩

೫. ಮಹಾಬಲೇಶ್ವರಪ್ಪ ಬಿ.ಸಿ(ಲೇ), **ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು,** ೧೯೯೭, ಪು.೨೪

೬. ಅಮರೇಶ ನುಗಡೋಣಿ(ಲೇ), **ರಾಯಚೂರು ಜಿಲ್ಲೆಯ ಹೈದರಾಬಾದ್ ವಿಮೋಚನಾ ಚಳುವಳಿ** ೨೦೦೦, ಪು.೧೩

೭. ಅದೇ, ಪು.೧೪

೮. ಅದೇ, ಪು.೪೯

೯. ಗೋಪಾಲರಾವ್ ಹೇಜೀಬ್(ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ,** ೨೦೦೧, ಪು.೪೫

೧೦. ಅದೇ, ಪು.೪೫

೧೧. ಸ್ವಾಮಿರಮಾನಂದತೀರ್ಥ(ಅನು), **ಹೋರಾಟದ ನೆನಪುಗಳು,** ಡಾ.ಸೂರ್ಯನಾಥ ಕಾಮತ್, ೧೯೭೭, ಪು.೧೩೫

೧೨. ಗೋಪಾಲರಾವ್ ಹೇಜೀಬ್(ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ,** ೨೦೦೧, ಪು.೧೫೬

೧೩. ವಸಂತಕುಷ್ಟಗಿ(ಲೇ), **ಸಂಯುಕ್ತ ಕರ್ನಾಟಕ** ದಿನಪತ್ರಿಕೆ ೨೦-೯-೧೯೯೮

೧೪. ಅದೇ

೧೫. ದೇವಿಂದ್ರಕುಮಾರ ಹಕಾರಿ(ಲೇ), **ಸಂಯುಕ್ತ ಕರ್ನಾಟಕ** ದಿನಪತ್ರಿಕ ೨೦.೯.೧೯೯೮ ಪು.೩

೧೬. ಕಲ್ಮಣಕರ್ ಡಿ.ಬಿ., **ಸಂದರ್ಶನ** ದಿನಾಂಕ ೧-೧-೨೦೦೨

೧೭. ಚನ್ನಬಸಪ್ಪ ಕುಳಗೇರಿ, **ಸಂದರ್ಶನ** ದಿನಾಂಕ ೬-೧-೨೦೦೨

೧೮. ಪಾಟೀಲ ಎಚ್.ಎಸ್. ಹಾಗೂ ಇತರರು, **ವಿಮೋಚನೆ(ಕೊಪ್ಪಳ ಜಿಲ್ಲೆ),** ೧೯೯೯, ಪು.೧೬೪

೧೯. ಅದೇ, ಪು.೧೬೪

# ಅಧ್ಯಾಯ ೩

# ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳು

ಭಾರತದ ಸ್ವಾತಂತ್ರ್ಯ ಹೋರಾಟ ಒಂದೆಡೆ ನಡೆಯುತ್ತಿದ್ದರೆ. ಮತ್ತೊಂದೆಡೆ ಈ ಹೈದರಾಬಾದ್ ಪ್ರಾಂತ್ಯದಲ್ಲಿ ವಿಮೋಚನಾ ಹೋರಾಟ ನಡೆಯುತ್ತಿತ್ತು. ಹೀಗಾಗಿ ಸ್ವಾತಂತ್ರ್ಯ ಹೋರಾಟದ ಅನೇಕ ಮಾದರಿಗಳನ್ನು ಅನುಸರಿಸಿ ಅದೇ ಮಾರ್ಗದಲ್ಲಿ ಅನೇಕ ರೂಪುರೇಷಗಳನ್ನು, ಧ್ಯೇಯೋದ್ದೇಶಗಳನ್ನು ಒಳಗೊಂಡ ಸಂಘ-ಸಂಸ್ಥೆಗಳು ಜನ್ಮ ತಳೆದಂತೆ ಈ ಭಾಗದಲ್ಲಿ ಶಿಬಿರಗಳು ಹುಟ್ಟಿಕೊಂಡವು. ಮೂಲತಃ ವಿಮೋಚನಾ ಪ್ರತಿಭಟನೆಯಲ್ಲಿ ಯಾವ ಯಾವ ಕೆಲಸಗಳನ್ನು ಎಲ್ಲಿ? ಹೇಗೆ? ಮಾಡಬೇಕೆಂಬ ಯೋಜನೆಯ ಪೂರ್ವ ತಯಾರಿಯೊಡನೆ ಅವುಗಳನ್ನು ಕಾರ್ಯರೂಪಕ್ಕೆ ತರುವುದು ಈ ಶಿಬಿರಗಳ ಮುಖ್ಯ ಕೆಲಸವಾಗಿತ್ತು. 'ಶಿಬಿರಗಳು' ಎಂದ ಕೂಡಲೇ ನಮ್ಮ ಕಣ್ಣೆದುರಿಗೆ ಇಂದು ನಿರಾಶ್ರಿತರ ಶಿಬಿರಗಳ ಕಲ್ಪನೆ ಮೂಡುತ್ತದೆ. ಇವುಗಳಲ್ಲಿ ಪ್ರಕೃತಿ ವಿಕೋಪ, ಯುದ್ಧ, ಕ್ಷಾಮ, ಮುಂತಾದ ಸಂದರ್ಭಗಳಲ್ಲಿ ಯಾವ ಆಶ್ರಯಗಳಿಲ್ಲದೆ ಇರುವವರನ್ನು ಕರೆತಂದು ಈ ಶಿಬಿರಗಳಲ್ಲಿ ನೆಲೆ ನಿಲ್ಲಲು ಅವಕಾಶ ಕಲ್ಪಿಸಿಕೊಡಲಾಗುತ್ತದೆ. ಆದರೆ ವಿಮೋಚನಾ ಹೋರಾಟ ಶಿಬಿರಗಳಲ್ಲಿ ಇಂತಹ ಯೋಜನೆಗಳು ಇರಲಿಲ್ಲ. ಅದಕ್ಕಿಂತಲೂ ಪ್ರಮುಖವಾಗಿ ನಿಜಾಂರವರ ಬಂಟರಾಗಿದ್ದಂತಹ ರಜಾಕಾರರಿಂದ ಯಾವ ಹಳ್ಳಿ ದಾಳಿಗೊಳಗಾಗುತ್ತದೆ ಎಂಬುದನ್ನು ತಮ್ಮ ಗುಪ್ತ ಸುದ್ದಿಗಾರರಿಂದ ಅರಿತುಕೊಂಡು ಅಂತಹ ಹಳ್ಳಿಗಳ ರಕ್ಷಣೆಗೆ ಮುಂದಾಗುವುದು ಹಾಗೂ ರಜಾಕಾರರ ವಿರುದ್ಧ

ಹೋರಾಡಿ ಹೈದರಾಬಾದ್ ಸಂಸ್ಥಾನವನ್ನು ಅಖಂಡ ಸ್ವಾತಂತ್ರ್ಯ ಭಾರತದ ಮಡಿಲಿಗೆ ಸೇರಿಸುವಂತಹ ಮಹತ್ವದ ಉದ್ದೇಶದಿಂದ ಹುಟ್ಟಿಕೊಂಡವು ಈ ಶಿಬಿರಗಳು.

### ೩.೧. ಶಿಬಿರಗಳ ಹುಟ್ಟು ಮತ್ತು ಬೆಳವಣಿಗೆ

ಮಾನವನ ಮೂಲಭೂತವಾದ ಹಕ್ಕುಗಳಿಗೆ ಚ್ಯುತಿ ಒದಗಿ, ಎಲ್ಲಾ ಸ್ವಾತಂತ್ರ್ಯಗಳನ್ನು ನಿಜಾಂ ಆಡಳಿತದಿಂದ ಕಳೆದುಕೊಂಡಿದ್ದ ಈ ಭಾಗದ ಜನತೆಗೆ ಪ್ರತಿಭಟನೆಯ ಅವಕಾಶವೇ ಇರಲಿಲ್ಲ. ನೋವುಂಡ ಜನತೆಯ ಸಿಟ್ಟು ಮಾತಿನ ಮೂಲಕ ಹೊರಹಾಕುವ, ಪ್ರತಿರೋಧದ ಧ್ವನಿ ಎತ್ತುವ, ಕೇಳುವ, ನೋಡುವ ಈ ರೀತಿಯ ಎಲ್ಲಾ ಕೆಲಸಗಳು ನಿರ್ಬಂಧಕ್ಕೊಳಗಾಗಿದ್ದವು. ನಿಜಾಂ ಸರಕಾರದ ಜನ ವಿರೋಧಿ, ಧರ್ಮವಿರೋಧಿ ಚಟುವಟಿಕೆಗಳ ಬಗ್ಗೆ ಮಾತನಾಡುವುದೂ ದೊಡ್ಡ ಅಪರಾಧವಾಗಿತ್ತು. ಹೈದರಾಬಾದ್ ಕರ್ನಾಟಕದ ಜನತೆ ಈ ದಬ್ಬಾಳಿಕೆಗಳನ್ನು ಸಹಿಸಿಕೊಳ್ಳಲಾರದೆ, ದೈಹಿಕ, ಮಾನಸಿಕ, ಆರ್ಥಿಕ, ಧಾರ್ಮಿಕ ಈ ಎಲ್ಲಾ ನಷ್ಟಕ್ಕೊಳಗಾದ ಅವರು ತಮ್ಮ ವೈಯಕ್ತಿಕ ನೆಲೆಯಲ್ಲಿ ಜನರನ್ನು ನಿಜಾಂ ಸರಕಾರದ ವಿರುದ್ಧ ಹೋರಾಡಲು ಪ್ರಚೋದಿಸಿದರು. ಅದನಂತರ ವಿದ್ಯಾವಂತರು, ರೋಷಿತರು ಒಂದೆಡೆ ಸೇರಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ, ಪೂರ್ವ ಯೋಜಿತವಾಗಿ ರಜಾಕಾರರ ಮೇಲೆರಗಿ, ಅವರಲ್ಲಿ ಭಯ ಹುಟ್ಟಿಸುವಂತಹ ಪ್ರತಿರೋಧ ತೋರಿಸಲು ಹಾಗೂ ಹೈದರಾಬಾದ್ ಕರ್ನಾಟಕವನ್ನು ರಜಾಕಾರರ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸುವ ಧ್ಯೇಯ-ಧೋರಣೆಗಳನ್ನು ಒಳಗೊಂಡು ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿ ಶಿಬಿರಗಳು ಸ್ಥಾಪನೆಗೊಳ್ಳಲು ಆರಂಭವಾದವು. ಈ ಗಡಿ ಶಿಬಿರಗಳ ಹೋರಾಟದ ರೀತಿಯು ತೀವ್ರಗಾಮಿ ಚಟುವಟಿಕೆಗಳಿಂದ ಕೂಡಿದ ಕಾರಣ ಎ.ಐ.ಸಿ.ಸಿ.ಯ ಅಂದಿನ ಕಾರ್ಯಕರ್ತರು ಇವುಗಳ ಸ್ಥಾಪನೆಯನ್ನು ಒಂದು ಹಂತದಲ್ಲಿ ವಿರೋಧಿಸಿದರು. ಆದರೆ ಕ್ರಿಯಾ ಸಮಿತಿಯ ಅಧ್ಯಕ್ಷ ದಿಗಂಬರರಾವ್ ಬಿಂದು ಹಾಗೂ ರಾಷ್ಟ್ರನಾಯಕರಾಗಿದ್ದ ಎಸ್.ನಿಜಲಿಂಗಪ್ಪ, ಬಿ.ಜಿ.ಖೇರ್ ಮುಂತಾದವರು ಗಾಂಧೀಜಿ, ಪಂಡಿತ ನೆಹರು ಹಾಗೂ ವಲ್ಲಬಾಯ್ ಪಟೇಲರನ್ನು ಮನವೊಲಿಸಿ ನಿಜಾಂನ ಮಿಲಿಟರಿ ಹಾಗೂ ರಜಾಕಾರರ ಆಕ್ರಮಣದ ವಿರುದ್ಧ ಶಸ್ತ್ರಾಸ್ತ್ರ ಹೋರಾಟ ನಡೆಸಲು ಗಡಿಶಿಬಿರಗಳನ್ನು ಸಂಘಟಿಸಲು ಅನುಮತಿ ಕೋರಿದರು. ಕಾರಣ ನಿಜಾಂನ ದಬ್ಬಾಳಿಕೆಯ ಆಡಳಿತ ಪ್ರವೃತ್ತಿಯನ್ನು, ಮುಗ್ಧ ಹಿಂದೂ ಜನರ ಹತ್ಯೆಯನ್ನು, ರಜಾಕಾರರ ಧಾರ್ಮಿಕ ಮತಾಂಧತೆಯನ್ನು ಗಮನಿಸಿದ ರಾಷ್ಟ್ರ ನಾಯಕರು ತಾವಾಗಿಯೇ ಹಿಂದೂಗಳ ಮಾನರಕ್ಷಣೆಯ ಅವಶ್ಯಕತೆಯನ್ನು ಅರಿತುಕೊಂಡು ಈ ಶಿಬಿರಗಳನ್ನು ಸ್ಥಾಪಿಸಲು ಅನುಮತಿ ನೀಡಿದರು.

ಕಾಂಗ್ರೆಸ್ ಕ್ರಿಯಾ ಸಮಿತಿಯ ನಿರ್ದೇಶನದ ಮೇರೆಗೆ ೧೯೪೭ ಸೆಪ್ಟೆಂಬರ್ ೨೫ನೇ ತಾರೀಖಿನಂದು ಹೈದರಾಬಾದ್ ಪ್ರದೇಶದ ಕಾಂಗ್ರೆಸ್ ಮುಂದಾಳುಗಳಾಗಿದ್ದ ಜನಾರ್ಧನರಾವ್ ದೇಸಾಯಿ, ಅನ್ನದಾನಪ್ಪ ದೊಡ್ಡಮೇಟಿ ಮೊದಲಾದವರು ಗದುಗಿನ ಗಾನಯೋಗಿ ಪಂಚಾಕ್ಷರಿಗವಾಯಿಗಳ ಆಶ್ರಮದಲ್ಲಿ ಸಭೆ ಸೇರಿ ರಜಾಕಾರರ ವಿರುದ್ಧ ಹೋರಾಡಲು, ಮುಗ್ಧ ಜನತೆಯ ಪ್ರಾಣರಕ್ಷಿಸಲು ಹೋರಾಡಬೇಕಾಗಿರುವ ವಿಧಿ-ವಿಧಾನಗಳನ್ನು ಚರ್ಚಿಸಿದರು. ಆ ಸಭೆಯಲ್ಲಿ ವಾಲಿ ಚನ್ನಪ್ಪನವರು "ಹೈದರಾಬಾದ್ ವಿಮೋಚನೆ ವಿಷಯದಲ್ಲಿ ಈಗ ಹಿಂಸೆ-ಅಹಿಂಸೆಯ ಪ್ರಶ್ನೆಯಿಲ್ಲ. ಇಂಥ ಸನ್ನಿವೇಶದಲ್ಲಿ ಸ್ವಾತಂತ್ರ್ಯಕ್ಕೋಸ್ಕರ ಅವರು ಸಾಯುವವರೋ ನಾವು ಸಾಯುವೆವೋ ಹೇಳಲು ಬರುವಂತಿಲ್ಲ. ಇದು ಅಹಿಂಸಾತ್ಮಕ ಹೋರಾಟವಲ್ಲ. ಸಾಕಷ್ಟು ಗಡಿ ಶಿಬಿರಗಳನ್ನು ತೆರೆದು ರಜಾಕಾರಕೇಂದ್ರಗಳ ಮತ್ತು ಕಂದಾಯ ಕಛೇರಿಗಳ ಮೇಲೆ ನಾವು ದೌಡು ಮಾಡಬೇಕು. ಇದಕ್ಕೆ ಬೇಕಾದ ಶಸ್ತ್ರಾಸ್ತ್ರ ಮತ್ತು ಬಾಂಬ್ ತಯಾರಿಕೆಯ ಸಾಮಾನುಗಳನ್ನು ತರಿಸಿಕೊಳ್ಳಬೇಕು. ಬಾಂಬಾ ತಯಾರಿಸುವವರನ್ನು ಕರೆತರುತ್ತೇವೆ. ನಾವು ಸ್ವತಂತ್ರರಾದ ಮೇಲೆ ಹೈದರಾಬಾದ್ ಮತ್ತು ಮೈಸೂರು ಜನರನ್ನು ಸ್ವತಂತ್ರ ಗೊಳಿಸು ವುದು ನಮ್ಮ ಕರ್ತವ್ಯ. ನಮ್ಮಂಥ ನುರಿತ ಜನರೇ ತಲೆ ತಪ್ಪಿಸಿಕೊಂಡರೆ ಉಳಿದವರ ಪಾಡೇನು? ಇವರನ್ನು ವಿಮೋಚನೆಗೊಳಿಸಲು ಎಷ್ಟು ಸಾಧ್ಯವಾಗುವುದೋ ಅಷ್ಟು ಸಹಾಯಮಾಡುತ್ತೇನೆ."[೧] ಅಂದು ನಡೆದ ಈ ಚಾರಿತ್ರಿಕ ಸಮಾವೇಶದಲ್ಲಿ ಈ ಕೆಳಗಿನ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ.

೧. ಸ್ವತಂತ್ರ ಭಾರತದ ದೇಶಪ್ರೇಮಿಗಳಿಂದ ಹಣಕಾಸು ಹಾಗೂ ಕಾರ್ಯಕರ್ತರ ನೆರವನ್ನು ಕೇಳುವುದು ಹಾಗೂ ಹೈದರಾಬಾದ್ ಸಂಸ್ಥಾನವನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸಲು ಒತ್ತಾಯಿಸುವ ಚಳುವಳಿಯನ್ನು ತೀವ್ರಗೊಳಿಸಲು ಬೊಂಬಾಯಿ ಹಾಗೂ ಮದರಾಸು ಪ್ರಾಂತಗಳಲ್ಲಿ ಗಡಿ ಶಿಬಿರಗಳನ್ನು ಸ್ಥಾಪಿಸುವುದು.

೨. ರಜಾಕಾರರ ವಿರುದ್ಧ ಸಶಸ್ತ್ರ ಹೋರಾಟ ನಡೆಸುವುದು.

೩. ಶಸ್ತ್ರಾಸ್ತ್ರ ಹೋರಾಟಕ್ಕೆ ಕಾರ್ಯಕರ್ತರನ್ನು ತರಬೇತಿಗೊಳಿಸುವುದು.

೪. ಪೊಲೀಸು ಹಾಗೂ ರಜಾಕಾರರ ಕೇಂದ್ರಗಳ ಮೇಲೆ ಹಲ್ಲೆ ನಡೆಸಲು ಹಾಗೂ ನಿಜಾಮನ ಆಡಳಿತದಿಂದ ಗ್ರಾಮಗಳನ್ನು ಮುಕ್ತಗೊಳಿಸಲು ಗಡಿಶಿಬಿರಗಳಲ್ಲಿನ ಕಾರ್ಯಕರ್ತರಿಗೆ ಸಾಕಾಗುವಷ್ಟು ಶಸ್ತ್ರಾಸ್ತ್ರ ಮದ್ದುಗುಂಡು ಸಂಗ್ರಹಿಸುವುದು.[೨]

ಹೀಗೆ ಸೇರಿದ್ದ ಅಂದಿನ ಸಮಾವೇಶದ ಪ್ರಯುಕ್ತ ಗರುಡ ಸದಾಶಿವರಾಯರ ಮನೆಯಲ್ಲಿ ಕಾಂಗ್ರೆಸ್ ಕಛೇರಿಯನ್ನು ಸ್ಥಾಪಿಸಲಾಯಿತು. ಗದಗಿನಲ್ಲಿರುವ ಈ ಕಛೇರಿಯಲ್ಲಿ ಗಡಿ ಶಿಬಿರಗಳ ಮಾರ್ಗದರ್ಶಕರಾಗಿ

ಜನಾರ್ಧನರಾವ್ ದೇಸಾಯಿಯವರು ನೇಮಕವಾದರು. ಈ ಕಛೇರಿಯು ರಜಾಕಾರರ ವಿರುದ್ಧ ಹೋರಾಡಲು ವಿಷಯ ಸಂಗ್ರಹಿಸುವ ಹಾಗೂ ಪ್ರಸಾರ ಮಾಡುವ ಕೆಲಸ ನಿರ್ವಹಿಸುತ್ತಿತ್ತು. ಜೊತೆಗೆ ಹೋರಾಟಕ್ಕೆ ಅಗತ್ಯವಾದ ಮಾರ್ಗದರ್ಶನ, ಮದ್ದುಗುಂಡುಗಳ ಪೂರೈಕೆ, ಹೋರಾಟದ ವಿಧಿವಿಧಾನ ಗಳನ್ನು ರೂಪಿಸಲು ನೆರವಾಗುತ್ತಿತ್ತು. ರಾಯಚೂರು ಭಾಗಕ್ಕೆ ಕೊಟ್ಟೂರು ಬಸಯ್ಯ ಹಾಗೂ ಗಡಿದಾಳು ನಾರಾಯಣಪ್ಪ, ಬೀದರ್ ಭಾಗಕ್ಕೆ ದತ್ತಾತ್ರೇಯ ಅವರಾದಿ ಹಾಗೂ ಕೊಲ್ಲೂರು ಮಲ್ಲಪ್ಪ ಇವರುಗಳನ್ನು ಉಸ್ತುವಾರಿಗಾಗಿ ನೇಮಿಸಿಕೊಳ್ಳಲಾಗಿತ್ತು.

## ೩.೨. ಶಸ್ತ್ರಾಸ್ತ್ರ ತರಬೇತಿ

ಹೈದರಬಾದ ವಿಮೋಚನ ಚಳವಳಿಯಲ್ಲಿ ಗಡಿಶಿಬಿರಗಳ ಪಾತ್ರ ಮಹತ್ವದ್ದಾಗಿದೆ. ಅದರಂತೆ ಶಿಬಿರಗಳಲ್ಲಿರುವ ಶಿಬಿರಾರ್ಥಗಳ ಕಾರ್ಯಗಳು ಅಷ್ಟೇ ಸಾಹಸಮಯ ಹಾಗೂ ಅಪಾಯಕಾರಿಯಾದ ಕೆಲಸವಾಗಿದ್ದವು. ರಜಾಕಾರರ ವಿರುದ್ಧ ಹೋರಾಡಲು ಧೀರ ಹಾಗೂ ಶಕ್ತಿಶಾಲಿಗಳಾದ ಯುವಕರು ಬೇಕಾಗುತ್ತಿದ್ದರು. ಆಗ ವಿಮೋಚನಾ ಹೋರಾಟಗಾರರು ಗ್ರಾಮಗಳಿಗೆ ಹೋಗಿ ಯುವ ಜನರಲ್ಲಿ ದೇಶಭಕ್ತಿಯ ಮಂತ್ರಹೇಳಿ, ನಿಜಾಂನ ಅತ್ಯಾಚಾರಗಳನ್ನು ಬಯಲಿಗೆಳೆದು ನಿಜಾಂನ ವಿರುದ್ಧ ಹೋರಾಡಲು ಹುರಿದುಂಬಿಸುತ್ತಿದ್ದರು. ಹಳ್ಳಿ ಹಳ್ಳಿಗಳಿಂದ ಹೋರಾಡಲು ಮುಂದೆ ಬಂದ ಯುವಕರನ್ನು ಗಡಿಶಿಬಿರಗಳಲ್ಲಿ ಆಶ್ರಯಕೊಟ್ಟು ಇವರಿಗೆ ಶಸ್ತ್ರಾಸ್ತ್ರ ತರಬೇತಿಗೊಸ್ಕರ ಸತಾರಾ, ಪುಣೆ, ಸೊಲ್ಲಾಪುರ, ವಾರಂಗಲ್, ಡೆಹರಾಡೂನ್, ಪಾಟಿಯಾಲ ಮುಂತಾದ ಶಸ್ತ್ರಾಸ್ತ್ರ ತರಬೇತಿಯ ಕೇಂದ್ರಗಳಿಗೆ ಶಿಬಿರದ ಮುಖಂಡರನ್ನು ಕಳಿಸಿಕೊಡಲಾಗುತ್ತಿತ್ತು. ''ಐ.ಎನ್.ಎ.ನ ನಿವೃತ್ತ ಅಧಿಕಾರಿಗ ಳಾಗಿದ್ದ ಕ್ಯಾಪ್ಟನ್ ರಾಮಚಂದ್ರಸಿಂಗ್ ಹಾಗೂ ಕ್ಯಾಪ್ಟನ್ ಜಗತ್‌ಸಿಂಗ್, ಮದ್ರಾಸ್-ಬೊಂಬಾಯಿ ಪ್ರಾಂತ್ಯಗಳ ಪೋಲೀಸ್ ಅಧಿಕಾರಿಗಳು ಡಿ.ಐ.ಜಿ., ಐ.ಜಿ.ಪಿ ಮುಂತಾದ ಉನ್ನತ ಅಧಿಕಾರಿಗಳು ತರಬೇತಿಗೆ ಬಂದ ಕಾರ್ಯಕರ್ತರಿಗೆ ೩೦೩, ೪೧೦, ೨೨ ಬಂದೂಕುಗಳನ್ನು ಬ್ರೆನ್ ೨೧ ಹಾಗೂ ಸ್ಟೆನ್‌ಗನ್ ೩೮, ಪಿಸ್ತೂಲು, ರಿವಲ್ವಾರ್‌ಗಳ ಬಳಕೆಯ ಬಗ್ಗೆ ತರಬೇತಿ ಕೊಟ್ಟರು. ಮುಂಬಾಯಿ ಪ್ರಾಂತ್ಯದ ಡಿ.ಐ.ಜಿ ಬಿಲ್ ಮೋರಿಯಾ ಹಾಗೂ ಐ.ಜಿ.ಪಿ. ಎನ್.ಎಮ್.ಕಾಮ್ಟೆಯವರು ಉತ್ಸಾಹಿ ರಾಷ್ಟ್ರೀಯವಾದಿ ಗಳಾಗಿದ್ದರು. ಧಾರವಾಡ ಜಿಲ್ಲಾ ಗೃಹರಕ್ಷಕ ದಳದ ಉನ್ನತ ಅಧಿಕಾರಿ ಬಿ.ವಿ.ಕೋರಟ್, ಪೋಲೀಸ್ ಉನ್ನತಾಧಿಕಾರಿ ಎಸ್.ಎಸ್.ನಾಯಕ್ ಹಾಗೂ ವಿಜಾಪೂರ ಜಿಲ್ಲಾ ಗೃಹರಕ್ಷಕದಳದ ಮುಖ್ಯಸ್ಥ ಎಸ್.ಟಿ.ಸಾಸನೂರ್‌ರವರುಗಳು[೬] ಗಡಿಶಿಬಿರಗಳ ಶಿಬಿರಾರ್ಥಿಗಳಿಗೆ ಶಸ್ತ್ರಾಸ್ತ್ರಗಳ ತರಬೇತಿ ಕೊಟ್ಟು ಯುವಕರ ಧೈರ್ಯವನ್ನು ಹೆಚ್ಚಿಸುವಲ್ಲಿ ಮೊದಲಿಗರಿದ್ದರು. ಮುಂಬೈ ಹಾಗೂ ಮದ್ರಾಸ್ ಪ್ರಾಂತ್ಯದ ಸ್ವಾತಂತ್ರ್ಯ ಹೋರಾಟಗಾರಿಂದ ಸಹಾಯ ಪಡೆದು ಗಡಿಶಿಬಿರಗಳನ್ನು

ನಡೆಸುತ್ತಿದ್ದರು. ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳಲ್ಲಿ ಶಿಬಿರಾಧಿಪತಿಯಾಗಿ ಕಾರ್ಯ ನಿರ್ವಹಿಸಿದ ಡಿ.ಬಿ.ಕಲ್ಮಣಕರ್, ಗುರುಭೀಮರಾವ್‌ಪಾಟೀಲ, ಅಣ್ಣಾರಾವ್‌ಪಾಟೀಲರು ಸೇರಿ ಅನೇಕ ಶಸ್ತ್ರಾಸ್ತ್ರ ಹಾಗೂ ಮದ್ದುಗುಂಡುಗಳನ್ನು ಬಳಸುವ ರೀತಿಯನ್ನು ಶಿಬಿರದ ಕಾರ್ಯಕರ್ತರಿಗೆ ತಿಳಿಸಿ ಕೊಡುತ್ತಿದರು. ಡಿ.ಬಿ.ಕಲ್ಮಣಕರ್ ಹಾಗೂ ಗುರುಭೀಮರಾವ್ ಪಾಟೀಲರು ಸ್ವತಃ ತಾವೇ ಕೈ ಬಾಂಬು ತಯಾರಿಸಿ ಗಡಿಶಿಬಿರಗಳಿಗೆ ರವಾನಿಸುತ್ತಿದ್ದರು.

ರೈಫಲ್, ಸ್ಟೆನ್‌ಗನ್, ಹಾಗೂ ಬಂದೂಕುಗಳನ್ನು ಹಾಗೂ ಅದರ ಬುಲೆಟ್‌ಗಳನ್ನು ಗೋವಾ, ಬಾಂಬೆ, ನಾಸಿಕ್, ಪ್ರದೇಶಗಳಿಂದ ಗಡಿಶಿಬಿರಾಧಿಪತಿಗಳು ತರಸಿಕೊಳ್ಳುತ್ತಿದರು. ಅನೇಕ ರಾಷ್ಟ್ರಪ್ರೇಮಿಗಳು ಗಡಿಶಿಬಿರಗಳಿಗೆ ಆರ್ಥಿಕ ಸಹಾಯ ನೀಡುತ್ತಿದರು. ಕೆಲವೊಮ್ಮೆ ಗಡಿಶಿಬಿರಗಳಿಗೆ ಆರ್ಥಿಕ ಮುಗ್ಗಟ್ಟು ಒದಗಿಬಂದರೆ ರಜಾಕಾರರ ಹಾಗೂ ನಿಜಾಂ ಕಛೇರಿಗಳ ಮೇಲೆದಾಳಿ ಮಾಡಿ ಅನೇಕ ಶಸ್ತ್ರಾಸ್ತ್ರ ಹಾಗೂ ಹಣವನ್ನು ವಶಪಡಿಸಿಕೊಳ್ಳುತ್ತಿದ್ದರು. ಕಲಬುರ್ಗಿಯ ಶರಣಪ್ಪಾ ಬೇರೋಜಿರವರು ಗುಪ್ತವಾಗಿ ಮನೆಯಲ್ಲಿ ಕೈಬಾಂಬು, ಹಾಗೂ ಭರ್ಚಿ, ಖಡ್ಗಗಳನ್ನು ತಯಾರಿಸಿ ಗಡಿಶಿಬಿರಗಳಿಗೆ ರವಾನಿಸುತ್ತಿದ್ದರು. ಹಾಗೂ ಕೊಲ್ಲೂರು ಮಲ್ಲಪ್ಪನವರು ಕಲುಬರ್ಗಿ ಜಿಲ್ಲೆಯ ಗಡಿಶಿಬಿರಗಳಾದ, ಧುದನಿ, ಗೌಡಗಾಂವ, ಕೇಸರಜವಳಗಾ, ಸಿಂದಗಿ, ವಾಗ್ದರಿಗಿ ಶಿಬಿರಗಳಿಗೆ ಸಂಚರಿಸಿ ಶಿಬಿರದ ಕಾರ್ಯಕರ್ತರಿಗೆ ಶಸ್ತ್ರಾಸ್ತ್ರಗಳ ಬಳಕೆಯ ತರಬೇತಿ ಕೊಡುತ್ತಿದ್ದರು. ಹೈದರಾಬಾದ್ ಗಡಿ ಪ್ರದೇಶಗಳಲ್ಲಿ ಸುಮಾರು ೧೦೦ ಶಿಬಿರಗಳಿದ್ದವು. ತಾಳಿಕೋಟಿ ಶಿಬಿರ, ಮೈಂಗರ್ದಿಶಿಬಿರ, ಸಿಂದಗಿ ಶಿಬಿರ, ವಾಗ್ದರಿಗಿ ಶಿಬಿರ, ಹಳ್ಳಿಕರೂರ್ ಶಿಬಿರ, ಮುಂಡರಗಿ ಶಿಬಿರ, ಕಕ್ಕಳಮೇಲಿಶಿಬಿರ, ಮುಂಡರಗಿ ಶಿಬಿರ, ತೊಂಡಚೇರ್ ಶಿಬಿರ, ಗೌಡಗಾಂವ ಶಿಬಿರ, ಲಿಂಗದಳ್ಳಿ ಶಿಬಿರ ಮುಂತಾದವು. ಅದರಲ್ಲಿ ಕಲಬುರ್ಗಿ ಜಿಲ್ಲೆಯ ಗಡಿಭಾಗದಲ್ಲಿ ನಿರ್ಮಾಣಗೊಂಡ ಧುದನಿ, ಗೌಡಗಾಂವ, ಕೇಸರ ಜವಳಾಗ, ಸಿಂದಗಿ, ವಾಗ್ದರಿಗಿ ಶಿಬಿರಗಳು ಪ್ರಮುಖವಾದ ಪಾತ್ರ ನಿರ್ವಹಿಸುತ್ತಿದ್ದವು.

ಪ್ರತಿಯೊಂದು ಶಿಬಿರದಲ್ಲಿ ೩೦ ರಿಂದ ೨೦೦ರವಗೆ ಕಾರ್ಯಕರ್ತರಿತ್ತಿದ್ದರು. ಅವರಲ್ಲಿ ಶಸ್ತ್ರಾಸ್ತ್ರ ವಿಭಾಗ, ಗುಪ್ತಚಾರವಿಭಾಗ ಹಾಗೂ ನಿಸ್ತ್ರಾಸ್ತ್ರ ವಿಭಾಗ ಈ ರೀತಿಯಗಿ ವಿಂಗಡಿಸಿ ತಮ್ಮ ಕಾರ್ಯವನ್ನು ಶಿಬಿರಾಧಪತಿಯ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದವು. ಶಸ್ತ್ರಾಸ್ತ್ರ ವಿಭಾಗ ಕಾರ್ಯಕರ್ತರು ಮದ್ದುಗುಂಡುಗಳು ಹಾಗೂ ಆಯುಧಗಳನ್ನು ತಯಾರಿಸಿ ಬೇರೆ ಪ್ರಾಂತ್ಯಗಳಿಂದ ತರಿಸಿ ಗಡಿಶಿಬಿರಗಳಿಗೆ ರವಾನಿಸುತ್ತಿದ್ದರು ಮತ್ತು ರಜಾಕಾರರ ಮೇಲೆ ದಾಳಿ ಮಾಡುತ್ತಿದ್ದು. ಹಾಗೆ ಗುಪ್ತಚಾರ ವಿಭಾಗದ ತಂಡದವರು ಗ್ರಾಮ ಗ್ರಾಮಗಳಿಗೆ ಹೋಗಿ ರಜಾಕಾರರ ಕೇಂದ್ರ ಕಚೇರಿಗಳನ್ನು ಪತ್ತೇ ಹಚ್ಚುತ್ತಿದ್ದರು. ಭಿಕ್ಷುಕರ, ಸಾಧುಗಳ, ನಾಟಕ ಆಡುವವರ, ತಂಬೂರಿ ನುಡಿಸುವವರ ಹಾಗೂ

ಕೀರ್ತನೆಕಾರರಂತೆ ಮಾರು ವೇಷ ಹಾಕಿ ರಜಾಕಾರರ ಹಾಗೂ ನಿಜಾಂ ಪೊಲೀಸರ ರೂಪುರೇಷೆಗಳನ್ನು ತಿಳಿದುಕೊಂಡು ಶಿಬಿರಾಧಿಪತಿಗಳಿಗೆ ಸುದ್ದಿಮುಟ್ಟಿಸುತ್ತಿದ್ದರು. ಈ ಎರಡು ವಿಭಾಗಗಳಂತೆ ನಿಶಸ್ತ್ರ ವಿಭಾಗದ ಕಾರ್ಯಕರ್ತರು ರಜಾಕಾರರಿಂದ ಅತ್ಯಾಚಾರ, ಕೊಲೆ, ಸುಲಿಗೆ ಹಾಗೂ ದಬ್ಬಾಳಿಕೆಗೆ ಒಳಗಾದ ಜನರಿಗೆ ಧೈರ್ಯ ಹೇಳಿ ನಿಜಾಂನ ವಿರುದ್ಧ ಹೋರಾಡಲು ಹುರಿದುಂಬಿಸುತ್ತಿದ್ದರು.

ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳು ಹಾಗೂ ಮುಖಂಡರು.

| ಕ್ರ.ಸಂ. | ಶಿಬಿರಗಳು | ಶಿಬಿರಾಧಿಪತಿ |
|---|---|---|
| ೧. | ಧುದನಿ ಶಿಬಿರ | ಗುರುಭೀಮರಾವ್ ಪಾಟೀಲ |
| ೨. | ಗೌಡಗಾಂವ ಶಿಬಿರ | ಭೈರಪ್ಪ ಪಾಟೀಲ ಭೂಸನೂರ |
| ೩. | ವಾಗ್ದರಿಗಿ ಶಿಬಿರ | ಅಣ್ಣಾರಾವ್ ವೀರಭದ್ರಪ್ಪ ಪಾಟೀಲ |
| ೪. | ಸಿಂದಿಗಿ ಶಿಬಿರ | ಸರದಾರ್ ಶರಣಗೌಡ ಪಾಟೀಲ ಇನಾಂದಾರ್ |
| ೫. | ಕೇಸರ ಜವಳಗಾ ಶಿಬಿರ | ದಿಗಂಬರ್‌ರಾವ ಕಲ್ಮಣಕರ್ |

## ೩.೩. ಧುದನಿ ಶಿಬಿರ

ಮಹಾರಾಷ್ಟ್ರ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ತಾಲೂಕಿನಲ್ಲಿರುವ ಈ ಗ್ರಾಮವು ಕರ್ನಾಟಕದ ಗಡಿ ಪ್ರದೇಶವಾಗಿದೆ. ಈ ಗ್ರಾಮವು ರೈಲು ಸಂಚಾರ ಹೊಂದಿದ್ದು, ಮಾಹಿತಿಗಳನ್ನು ಸಂಗ್ರಹಿಸಲು ಮತ್ತು ರವಾನಿಸಲು ಸೂಕ್ತವಾದ ಸೌಲಭ್ಯಗಳನ್ನು "ಧುದನಿ" ಗ್ರಾಮವು ಹೊಂದಿತ್ತು. ಇಲ್ಲಿನ ಜನರು ಹಿಂದಿ, ಉರ್ದು, ಮರಾಠಿ ಹಾಗೂ ಕನ್ನಡ ಭಾಷೆಯನ್ನು ಬಲ್ಲವರಾಗಿದ್ದು, ಅನೇಕ ಪ್ರಮುಖ ನಗರಗಳೊಂದಿಗೆ ಸಂಪರ್ಕ ಹೊಂದಿದ್ದರು. ರಜಾಕಾರರ ಹಾವಳಿಯಿಂದ ಬೇಸತ್ತ ಜನತೆ ಧುದನಿ ಗ್ರಾಮದಲ್ಲಿ ಸಭೆ ಸೇರಿ ವಿಮೋಚನಾ ಹೋರಾಟದ ಮುಂದಾಳತ್ವ ವಹಿಸಿಕೊಂಡು ಶಿಬಿರವೊಂದನ್ನು ಸ್ಥಾಪಿಸಿದರು. ಈ ಶಿಬಿರಕ್ಕೆ ಮಧುಗುಣಕಿಯ ಗುರುಭೀಮರಾವ್ ಪಾಟೀಲರು ಮುಂಚೂಣಿಯ ವ್ಯಕ್ತಿಯಾಗಿ ಶಿಬಿರವನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿ ಹೊತ್ತುಕೊಂಡರು. ಆಗ ಸುತ್ತ ಮುತ್ತಲಿನ ಊರುಗಳ ಅನೇಕ ಜನರು ಒಟ್ಟಾಗಿ ಪಾಲ್ಗೊಳ್ಳುವ ಮೂಲಕ ವಿಮೋಚನಾ ಹೋರಾಟಗಾರರ ಸಂಖ್ಯೆಯನ್ನು ಹೆಚ್ಚಿಸಿದುದಲ್ಲದೆ ಹೋರಾಟದ ಕಿಚ್ಚನ್ನು ಹೆಚ್ಚಿಸುವಲ್ಲಿ ಯಶಸ್ವಿಯಾದರು.

ಧುದನಿಯ ಅಕ್ಕಪಕ್ಕದ ಊರುಗಳಾದ ಸಿನ್ನೂರು, ಬಳೂರಗಿ, ನಂದರಗಾ ಮತ್ತು ಜೇವರ್ಗಿಗಳಲ್ಲಿ ಪಠಾಣರ ದಾಳಿಯು ತೀವ್ರವಾಗಿತ್ತು. ಬೇಸತ್ತ ಜನತೆ ತಮ್ಮ ನೋವುಗಳನ್ನು ಧುದನಿ ಶಿಬಿರಾಧಿಪತಿಗೆ ಹೇಳಿಕೊಂಡರು. ಒಮ್ಮೆ ಪಠಾಣರ ಹಾವಳಿಯನ್ನು ಮುಂಚಿತವಾಗಿ ಅರಿತುಕೊಂಡು ಸಿನ್ನೂರು, ಬಳೂರಗಿ ಗ್ರಾಮದ ಜನತೆಯ ಸಹಾಯದಿಂದ ಪಠಾಣರ ಸೈನಿಕರ ಮೇಲೆರಗಿ ಖಡ್ಗಗಳು,

ಬಂದೂಕುಗಳನ್ನು ವಶಪಡಿಸಿಕೊಂಡರು. ರಜಾಕಾರರು ಮತ್ತೊಮ್ಮೆ ಜನತೆಯ ಮೇಲೆರಗಿ ಬರದಂತೆ ತಡೆಯೊಡ್ಡಿದರು. ಜೇವರ್ಗಿಯ ವಿಠಲಗೌಡರು ಪಠಾಣರಿಗೆ ತೀವ್ರವಾದ ಪ್ರತಿರೋಧ ಒಡ್ಡಿ, ಪಠಾಣರ ವಸತಿಗಳನ್ನು ನಾಶಪಡಿಸಿದರು. ಇದರಿಂದ ಪಠಾಣರದಿವರನ್ನು ಹುಡುಕುತ್ತಿದ್ದರು. ಗೌಡರ ಮನೆಯ ಹೆಣ್ಣು ಮಗಳಿಗೆ ಸುಳಿವು ಕೊಡುವಂತೆ ಕಿರುಕುಳ ನೀಡಿದರಲ್ಲದೆ ಅವಳ ಕೈಕಾಲನ್ನು ಪಠಾಣರು ಕತ್ತರಿಸಿ ಹಾಕಿದರು. ಈ ಘಟನೆ ತಿಳಿದ ಗೌಡರು ಓಡಿ ಬಂದು ಮನೆ ಸೇರಬೇಕೆಂದು ಹವಣಿಸಿದರು. ಗೌಡರು ಊರು ಸಮೀಪ ಮುಲ್ಲಾಹೊಲದಲ್ಲಿ ಪಠಾಣರ ಕೈಗೆ ಸಿಕ್ಕಿಬಿದ್ದರು. ಪಠಾಣರು ವಿಠಲಗೌಡರನ್ನು ಅದೇ ಹೊಲದಲ್ಲಿ ಬೆಂಕಿ ಹಚ್ಚಿ ಜೀವಸಹಿತ ದಹನ ಮಾಡಿದ್ದರು. ಹೀಗೆ ಅನೇಕ ದುರಂತಗಳಿಗೆ ತುತ್ತಾಗುತ್ತಿದ್ದ ಗ್ರಾಮಗಳು ಚಿಂತಾಜನಕವಾಗಿದ್ದವು. ಸುತ್ತಮುತ್ತಲಿನ ಜನರಿಗೆ ಧೈರ್ಯ ಮತ್ತು ಸಹಾಯ ನೀಡುತ್ತಿದ್ದ ಗುರುಭೀಮರಾವ್ ಪಾಟೀಲರು ಪ್ರತಿಯೊಂದು ಹಳ್ಳಿಗೆ ಹೋಗಿ ಅವರ ಸಮಸ್ಯೆಗಳನ್ನು ಕೇಳುತ್ತಿದ್ದರು. ಇವರ ಜೊತೆ ನಂದರಗಾ ಗ್ರಾಮದ ಜಹಗೀರದಾರ ಆದ ಪಚ್ಚೇಸಾಬ ಈ ಗ್ರಾಮಗಳ ಸುಖದುಃಖ ನೋಡಿಕೊಳ್ಳುತ್ತಿದ್ದರು. ಇವರು ಹೈದರಬಾದ ನಿಜಾಂನಲ್ಲಿ ಜಹಗೀರದಾರ ಆಗಿ ಸೇವೆಸಲ್ಲಿಸುತ್ತಿದ್ದರು. ಇವರು ಮುಸ್ಲಿಂ ಜನಾಂಗದವರಾದರೂ ನಿಜಾಂ ಮತ್ತು ರಜಾಕಾರರ ಕೆಟ್ಟ ಕಾರ್ಯಗಳಿಗೆ ಆಸ್ಪದ ಕೊಡುತ್ತಿರಲಿಲ್ಲ. ಇವರು ಊರು ಕಾವಲು ಕಾಯಲು ಒಬ್ಬ ವಾಲೀಕಾರನನ್ನು ನೇಮಿಸಿದರು. ಆ ೨೫ ವರ್ಷದ ತರುಣರಾದ ಶರಣಪ್ಪ ದೊಡ್ಡಮನಿ ಇವರು ಜಹಗೀರದಾರ ಪಚ್ಚೇಸಾಬರ ಬೆನ್ನೆಲುಬಾಗಿ ನಿಂತರು. ಅನೇಕ ಸಲ ರಜಾಕಾರರು ಊರಲ್ಲಿ ಪ್ರವೇಶ ಮಾಡಲು ಯತ್ನಿಸಿದಾಗ ಅವರನ್ನು ಹಿಂದಕ್ಕೆ ಓಡಿಸುತ್ತಿದ್ದರು. ಕೇವಲ ಕಲ್ಲು ಮತ್ತು ಕಾವಣಿ ಕೆಲ ಬಂದೂಕುಗಳನ್ನು ಹಿಡಿದು ಅವರನ್ನು ಹಿಮ್ಮೆಟಿಸಿದರು.

ಪಠಾಣರು ಕುದುರೆಗಳ ಮೇಲೆ ಕುಳಿತುಕೊಂಡು, ತಲೆಗೆ ಕಪ್ಪು ಬಟ್ಟೆಕಟ್ಟಿಕೊಂಡು, ಟೊಂಕಕ್ಕೆ ತೊಗಲಿನ ದೊಡ್ಡದಾದ ಪಟ್ಟಾ ಕಟ್ಟಿಕೊಂಡು ಕೈಯಲ್ಲಿ ಬಂದೂಕು, ಖಡ್ಗ, ಬಾಚಿ, ಹಿಡಿದುಕೊಂಡು ಬರುತ್ತಿದ್ದರು. ಪಠಾಣರ ಬರುವ ಸುಳಿವು ಸಿಕ್ಕ ತಕ್ಷಣ ಶರಣದೊಡ್ಡಮನಿ, ಹಸನಪ್ಪ ದೊಡ್ಡಮನಿ, ಚಂದ್ರಶಾವಾಗ್ದರಿಗಿ, ದೌಲಪ್ಪ ಚಂಡಕಿ, ಪಾರಪ್ಪ ದೊಡ್ಡಮನಿ, ಗೌವಪ್ಪ ದೊಡ್ಡಮನಿ, ರೇವಣಸಿದ್ದಪ್ಪ ಪಾಟೀಲ್ ಜೇವರ್ಗಿ, ಶಿವರಾಯ ಪಾಟೀಲ ಜೇವರ್ಗಿ, ಮಲ್ಲೇಶಪ್ಪ ಮಗಣಗೇರಿ, ದುಂಡಪ್ಪ ಪೂಜಾರಿ, ಯಲ್ಲಪ್ಪ ಅಳ್ಳಗಿ ಇವರೆಲ್ಲರು ಸೇರಿ ರಜಾಕಾರರನ್ನು ಹೊಡೆದು ಓಡಿಸುತ್ತಿದ್ದರು. ಗುರುಭೀಮರಾವ್ ಪಾಟೀಲರು ನಂದರಗಾ ಹಾಗೂ ಜೇವರ್ಗಿ ಗ್ರಾಮಕ್ಕೆ ಅನೇಕ ಸಲ ಭೇಟಿಕೊಟ್ಟು ಜನರಲ್ಲಿ ಧೈರ್ಯ ತುಂಬುತ್ತಿದ್ದರು. ಹೀಗೆ ಹಗಲು ರಾತ್ರಿ ಅನ್ನದೇ ಧೈರ್ಯಶಾಲಿಗಳಾದ ಶರಣಪ್ಪ ದೊಡ್ಡಮನಿ, ಹಸನಪ್ಪ ದೊಡ್ಡಮನಿ, ಪಾರಪ್ಪ, ಗೌವಪ್ಪ ದೊಡ್ಡಮನಿ ಇವರು ಊರ ಜನತೆಯ ಕಾವಲು ಮಾಡುತ್ತಿದ್ದರು. ಈ ರೀತಿಯಾಗಿ ತಮ್ಮ ಹೋರಾಟದ ಜೀವನದ ಅನುಭವ ಹಾಗೂ

ದೇಶ ಭಕ್ತಿಯನ್ನು ಹಸನಪ್ಪ ದೊಡ್ಡಮನಿಯವರು ತೋರಿಕೊಂಡರು. ಪ್ರಸ್ತುತ ಇವರು ಯಾವುದೇ ಸರಕಾರಿ ಸೌಲಭ್ಯಗಳನ್ನು ಪಡೆಯದೇ ಸ್ವಗ್ರಾಮದಲ್ಲಿ ಜೀವನ ಸಾಗಿಸುತ್ತಿದ್ದಾರೆ.[೪]

ದಿಗ್ಗಸಂಗಿ ಗ್ರಾಮದ ಮೇಲೆ ನಡೆಸಿದ ಆಕ್ರಮಣದಲ್ಲಿ ರಜಾಕಾರರಿಂದ ಮೂವತ್ತು ಬಂದೂಕುಗಳನ್ನು ಧುದನಿ ಶಿಬಿರದ ಕಾರ್ಯಕರ್ತರು ೨೬ನೇ ಜುಲೈ ೧೯೪೮ ರಂದು ವಶಪಡಿಸಿಕೊಂಡರು. ಹಾಗೂ ಸಣಲಿಗಿ ಹಳ್ಳಿಯ ಮೇಲೆ ರಜಾಕಾರರು ನಡೆಸಿದ ಆಕ್ರಮವನ್ನು ಎದುರಿಸಿ ಐದು ಬಂದೂಕು, ಹಾಗೂ ಅವರ ಕುದುರೆಗಳನ್ನು ವಿಮೋಚನಾ ಹೋರಾಟಗಾರರಾದ ಚಂದ್ರಶೇಖರ ಬೈರಮಡಗಿ, ಸಿದ್ಧರಾಮಪ್ಪ ತೆಲ್ಲೂರ, ಅಣವಿರಯ್ಯ ಸ್ಟೇಷನ್ ಗಾಣಗಾಪೂರ, ಮುಂತಾದವರು ಸೇರಿ ರಜಾಕಾರರೊಂಡನೆ ಹೋರಾಡಿ ತಮ್ಮ ಅಧೀನಕ್ಕೆ ತೆಗೆದುಕೊಂಡರು. ಅರ್ಜಣಗಿ, ಕುಲಾಲಿ, ರೇವೂರ್ ಗ್ರಾಮದ ಜನತೆಗೆ ಪಠಾಣರು ಅನೇಕ ತೊಂದರೆಗಳನ್ನು ಕೊಡುತ್ತಿದ್ದರು. ಈ ಗ್ರಾಮಗಳ ಜನತೆಯನ್ನು ಹೆದರಿಸಿ ಅವರಲಿದ್ದ ಹಣ, ಆಭರಣ ಹಾಗೂ ವರ್ಷವಿಡಿ ಕಷ್ಟಪಟ್ಟು ದುಡಿದು ಸಂಗ್ರಹಿಸಿದ ದವಸ ಧ್ಯಾನಗಳನ್ನು ಕಬಳಿಸಿಕೊಳ್ಳುತ್ತಿದ್ದರು. ಇದರಿಂದ ಬೇಸತ್ತ ಜನರು ಗುರುಭೀಮರಾವ್ ಪಾಟೀಲರನ್ನು ಸಂಪರ್ಕಿಸಿ, ಪಾಟೀಲರಿಗೆ ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಆಗ ಗುರುಭೀಮರಾವ್ ಪಾಟೀಲರು ಗುರುನಾಥ ಮಾತೋಳಿ, ಮಲ್ಲೇಶಪ್ಪ ನಿಂಬಾಳ, ಶಿವಪ್ಪ ಭೂಸನೂರ, ಈರಣ್ಣ ಭೂಸನೂರ, ಶಿವಪ್ಪ ಮಾಶಾಳ ಮುಂತಾದ ಯುವಕರನ್ನು ಸೇರಿಸಿ ಒಂದು ತಂಡವನ್ನು ರಚಿಸಿದರು. ಇವರಿಗೆ ಶಸ್ತ್ರಾಸ್ತ್ರ ತರಬೇತಿಯನ್ನು ಕೊಟ್ಟು ಸ್ಥೈರ್ಯ ತುಂಬಿ ರಜಾಕಾರರ ಹಾಗೂ ಪಠಾಣರ ಪಡೆಗಳ ಮೇಲೆ ದಾಳಿಮಾಡಲು ಸೂಚಿಸಿದರು. ಇವರ ಮಾರ್ಗದರ್ಶನದಲ್ಲಿ ಈ ಯುವಕರು ರಜಾಕಾರರ ಹಾಗೂ ಪಠಾಣರ ದೌರ್ಜನ್ಯಗಳನ್ನು ತಡೆದರಲ್ಲದೇ ಅವರಲ್ಲಿದ್ದ ಶಸ್ತ್ರಾಸ್ತ್ರಗಳಾದ ಹತ್ತು ಬಂದೂಕು ಹದಿನೈದು ಖಡ್ಗಗಳು ಮತ್ತು ಅನೇಕ ಭರ್ಚಿಗಳನ್ನು ವಶಪಡಿಸಿಕೊಂಡರು. ಇದೇ ರೀತಿ ಗವೂರ ಮತ್ತ ಮಾಶಾಳ, ಗ್ರಾಮಗಳಲ್ಲಿ ರಜಾಕಾರರು ಅನೇಕ ಮದ್ದುಗುಂಡುಗಳನ್ನು ಹಾಗೂ ಬಂದೂಕು ತಯಾರಿಸುತ್ತಿದ್ದರು. ಇದನ್ನರಿತ ಶಿವಗೌಡಪ್ಪ ಮಾಶಾಳ, ಸಿದ್ಧರಾಮ ಮಾಶಾಳ, ಹರಿಹರರಾವ್ ಅಫಜಲಪೂರ್, ತುಕ್ಕಪ್ಪ ಪ್ಯಾಟ, ಇಟ್ಟಪ್ಪ ಅಫಜಲಪೂರ ಮುಂತಾದವರು ಸೇರಿ ರಜಾಕಾರರ ಮದ್ದುಗುಂಡುಗಳನ್ನು ತಯಾರಿಸುವ ಕೇಂದ್ರಗಳ ಮೇಲೆ ದಾಳಿ ಮಾಡಿದರು. ಈ ದಾಳಿಯಲ್ಲಿ ರಜಾಕಾರರ ಮದ್ದುಗುಂಡುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಧುದನಿ ಗೌಡಗಾಂವ ಶಿಬಿರಗಳ ಕಾರ್ಯಕರ್ತರಿಗೆ ಕಳಿಸಿಕೊಟ್ಟರು. ಈ ರೀತಿ ವಶಪಡಿಸಿಕೊಂಡ ಈ ಶಸ್ತ್ರಾಸ್ತ್ರಗಳನ್ನು ವಿಮೋಚನಾ ಹೋರಾಟಗಾರರು ಹೋರಾಟಕ್ಕೆ ಬಳಸುತ್ತಿದ್ದರು.

ಧುದನಿ ಶಿಬಿರದ ವತಿಯಿಂದ ಮಧುಗುಣಕಿಯ ಶಿವಲಿಂಗಪ್ಪ, ಮಾದನಹಿಪ್ಪರಗದ ಶಿವಲಿಂಗಪ್ಪ ಹಾಗೂ ಕಾಸೀರಾಯರವರು ಸ್ವಾತಂತ್ರ್ಯಕ್ಕಾಗಿ ಹಾಗೂ ಹೈದರಾಬಾದ್ ಸಂಸ್ಥಾನದ ವಿಲೀನಕ್ಕಾಗಿ

೧೨ನೇ ಜೂನ್ ೧೯೪೮ರಂದು ಹೋರಾಡಿ ತಮ್ಮ ಪ್ರಾಣ ಬಲಿಕೊಟ್ಟರು. ಅನೇಕ ಸುತ್ತಮುತ್ತಲ್ಲಿನ ಗ್ರಾಮದ ಜನರು ಧುದನಿ ಶಿಬಿರಾರ್ಥಿಗಳಿಗೆ ಊಟ ಮತ್ತು ಅವರಿಗೆ ಬೇಕಾಗುವ ವಸ್ತುಗಳನ್ನು ಭಯದಿಂದ ರಾತ್ರಿಯ ವೇಳೆಯಲ್ಲಿ ವಿತರಿಸುತ್ತಿದ್ದರು. ಧುದನಿ ಶಿಬಿರಾರ್ಥಿಗಳಂದ ನಿಂಬರಗ ಯಲಸಂಗಿ, ನಾಗೂರ, ಚಿಂಚೋಳಿ, ಬೋರಟ್ಟಿ ಗ್ರಾಮಗಳನ್ನು ರಜಾಕಾರರ ದಬ್ಬಾಳಿಕೆಯಿಂದ ಮುಕ್ತಿಗೊಳಿಸಿದರು. ಈ ಶಿಬಿರದ ಪ್ರಧಾನ ದಳಪತಿ ಶಿವರಾಯ ಈ ಗ್ರಾಮಗಳ ವಿಮೋಚನಾ ಸಂಘರ್ಷದಲ್ಲಿ ಅನೇಕ ರಜಾಕಾರರ ಸೈನಿಕರನ್ನು ಬಲಿತೆಗೆದುಕೊಳ್ಳುವುದರ ಮೂಲಕ ತಾವೂ ಸಹ ಬಲಿಯಾದರು. ಮಧುಗುಣಕಿಯ ಗುರುಭೀಮರಾವ ಮತ್ತು ಮಲ್ಲಕಾಜಪ್ಪ ಜೀವೂರ ಮುಂತಾದವರು. ಸೇರಿ ೧೦.೧.೧೯೪೮ರಂದು ಕಲಬುರ್ಗಿ ಜಿಲ್ಲೆಯ ನಿಂಬಾಳ ಅಂಚೆ ಕಛೇರಿಯ ಮೇಲೆ ದಾಳಿಮಾಡಿ ಅಂಚೆ ಮಾಸ್ತರನ್ನು ಕೊಂದು ಅಲ್ಲಿಂದ ಹಣವನ್ನು ಅಪಹರಿಸಿಕೊಂಡು ೧೮.೧.೧೯೪೮ರಂದು ಹೈದರಾಬಾದ್ ರಾಜ್ಯಕಾಂಗ್ರೆಸನ ಜೈಹಿಂದ್ ಶಿಬಿರವನ್ನು ಏರ್ಪಡಿಸಿದರು.[೫]

೧೯೪೮ನೇ ಫೆಬ್ರುವರಿ ತಿಂಗಳಲ್ಲಿ ಕಲಬುರ್ಗಿ ಜಿಲ್ಲೆಯ ಮಾದನ ಹಿಪ್ಪರ್ಗಾ ಗ್ರಾಮದ ಕರಡೋಗಿ ನಾಕಾದ ಮೇಲೆ ದಾಳಿ ನಡೆಸಿ ಬೆಂಕಿ ಹಚ್ಚಿ ಅದನ್ನು ಸುಟ್ಟು ಹಾಕಿದರು. ಮಾರ್ಚ ೧೯೪೮ರಲ್ಲಿ ನಿಂಗದಳ್ಳಿ ತೆರಿಗೆ ಅಧಿಕಾರಿಗಳ ಕಾರ್ಯಲಯದ ಮೇಲೆ ದಾಳಿನಡೆಸಿ ಅಲ್ಲಿ ರಾಷ್ಟ್ರೀಯ ಧ್ವಜವನ್ನು ಹಾರಿಸಿದರು. ಅದೇ ವರ್ಷ ಮಾರ್ಚ ತಿಂಗಳಲ್ಲಿ ಮಾದನ ಹಿಪ್ಪರ್ಗಾಸ್ವಾಮಿ ಮತ್ತು ಶಿವಲಿಂಗಪ್ಪ ದುತ್ತರಗಿ ಮುಂತಾದವರು ಸೇರಿ ದಾಳಿ ಮಾಡಲು ಹೋದಾಗ ರಜಾಕಾರರು ಇವರಿಬ್ಬರನ್ನು ಬಂಧಿಸಿದರು. ಉಳಿದವರು ಅವರ ಕೈಗೆ ಸಿಗದೆ ಓಡಿಹೋದರು. ಮುಂದೆ ಧುದನಿ ಶಿಬಿರದಲ್ಲಿ ಅನೇಕ ಧೀರಯೋಧರು ಖಾಯಂ ಹಾಗಿ ಉಳಿದು ಮಾದನಹಿಪ್ಪರಗಾ, ನಿಂಬಾಳ, ಯಳಸಂಗಿ, ಅರ್ಜುಣಗಿ, ಇಲ್ಲಿರುವ ಎಲ್ಲಾ ರಜಾಕಾರರ ಶಿಬಿರಗಳ ಮೇಲೆ ಹತ್ತೆಂಟು ಸಲ ದಾಳಿ ಮಾಡಿ ಅನೇಕ ರಜಾಕಾರರನ್ನು ಕೊಂದು ಹಾಕಿದರು. ಹೀಗೆ ಅನೇಕ ಗ್ರಾಮಗಳ ಜನತೆಯ ನಿದ್ದೆ ಕೆಡಿಸಿದ ರಜಾಕಾರರನ್ನು ಧುದನಿ ಶಿಬಿರಾರ್ಥಿಗಳು ಧೈರ್ಯದಿಂದ ಎದುರಿಸಿದರು. ಅನೇಕ ಜನರು ತಮ್ಮ ಮನೆ, ಊರು, ಆಸ್ತಿಗಳನ್ನು ಬಿಟ್ಟು ಬೇರೆ ಕಡೆಗೆ ವಲಸೆ ಹೋಗಿದ್ದರು. ಹಳ್ಳಿಹಳ್ಳಿಗಳಲ್ಲಿ ಜನರು ಸಂಜೆಯಾದ ತಕ್ಷಣ ಶಿಬಿರಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಿಕೊಡುತ್ತಿದ್ದರು. ನಿಜಾಂ ಪೊಲೀಸರಿಗೆ ಹಾಗೂ ರಜಾಕಾರರಿಗೆ ಗೊತ್ತಾಗದಂತೆ ಶಿಬಿರದ ಕಾರ್ಯಕರ್ತರಿಗೆ ಊರ ಜನರು ಸಹಾಯ ಮಾಡುತ್ತಿದ್ದರು.

ಕೊಲ್ಲೂರು ಮಲ್ಲಪ್ಪ ಅವರು ಕರಪತ್ರವನ್ನು ಬರೆದು ಅದರಲ್ಲಿ ರಜಾಕಾರರ ದೌರ್ಜನ್ಯ ಮತ್ತು ನಿಜಾಂನ ಕೆಟ್ಟ ಆಡಳಿತ ನೀತಿಯನ್ನು ಜನರಿಗೆ ಸರಳ ರೀತಿಯಲ್ಲಿ ತಿಳಿಯುವ ಹಾಗೆ ಬರೆದು ಕಳಿಸುತ್ತಿದ್ದರು. ಅವುಗಳನ್ನು ಗ್ರಾಮ ಗ್ರಾಮಗಳಿಗೆ ಹೋಗಿ ವಿಮೋಚನಾ ಹೋರಾಟಗಾರರು ಹಂಚಿ

ಬರುತ್ತಿದ್ದರು. ಅನೇಕ ಯುವಕರು ಮಾರುವೇಷ ಹಾಕಿ ಕರಪತ್ರಗಳನ್ನು ಒಂದು ಶಿಬಿರದಿಂದ ಇನ್ನೊಂದು ಶಿಬಿರಕ್ಕೆ ರವಾನಿಸುತ್ತಿದ್ದರು. ಕರಪತ್ರಗಳಲ್ಲಿ ಶಿಬಿರದ ಉದ್ದೇಶ ಹಾಗೂ ಅವರ ಮುಂದಿನ ಕಾರ್ಯಗಳನ್ನು ಹೇಗೆ ಮತ್ತು ಎಲ್ಲಿ ನಡೆಸಬೇಕು ಎಂಬ ತೀರ್ಮಾನಗಳಿರುತ್ತಿದ್ದವು. ಮಲಕಾಜಪ್ಪ ಜೀವೂರ ಮತ್ತು ಗುರುಭೀಮರಾವ ಪಾಟೀಲ, ಗಿರಿಮಲ್ಲಪ್ಪ, ಮಲ್ಲೇಶಪ್ಪ ನಿಂಬಾಳ, ಮುಂತಾದ ಯುವಕರು ಸೇರಿ ಕರಪತ್ರಗಳನ್ನು ಹಂಚಲು ಸೀರೆ ಉಟ್ಟುಕೊಂಡು ಒಂದು ತಂಬಿಗೆಯಲ್ಲಿ ಗಂಜಿ ಹಾಕಿಕೊಂಡು ಪ್ರಮುಖ ಸ್ಥಳಗಳಲ್ಲಿ ಅಂಟಿಸಿ ಬರುತ್ತಿದ್ದರು. ಇದನ್ನು ತಡೆಯಲು ಅನೇಕ ಸಲ ರಜಾಕಾರರು ಯತ್ನಿಸಿದ್ದರು. ಆದರೂ ವಿಫಲರಾದರು. ಈ ಭಿತ್ತಿ ಪತ್ರಗಳನ್ನು ಅಂಟಿಸುವವರನ್ನು ಹಿಡಿದು ಕೊಟ್ಟವರಿಗೆ ೫೦೦ ರೂಪಾಯಿ ಬಹುಮಾನ ಕೊಡುವುದಾಗಿ ಕಾಸಿಂ ರಜ್ವಿ ಘೋಷಿಸಿದನು. ಆದರೆ ರಜಾಕಾರರಿಗೆ ಯಾರು ಸಹಾಯ ಮಾಡಲಿಲ್ಲ. ರಜಾಕಾರರನ್ನು ಎದುರಿಸಲು ಶಿಬಿರದ ಕಾರ್ಯಕರ್ತರಲ್ಲಿ ಹೆಚ್ಚು ಶಸ್ತ್ರಾಸ್ತ್ರಗಳು ಇರಲಿಲ್ಲ. ಆದರೆ ರಜಾಕಾರರ ಮುಖಂಡನಾದ ಕಾಸಿಂ ರಜ್ವಿಯು ರಜಾಕಾರರಿಗೆ ಅನೇಕ ರೀತಿಯ ಶಸ್ತ್ರಾಸ್ತ್ರಗಳು ಹಾಗೂ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದನು. ಶಿಬಿರದಲ್ಲಿಂದ ಅನೇಕ ಯುವಕರು ತಂಡ ತಂಡಗಳಾಗಿ ಗ್ರಾಮಗಳಿಗೆ ಹೋಗಿ ರಜಾಕಾರರ ಹಾವಳಿಗೆ ತುತ್ತಾದ ಜನರಿಗೆ ಧೈರ್ಯ ಹೇಳುತ್ತಿದ್ದರು. ಮನೆಗಳಲ್ಲಿ ಹೆದರಿಕುಳಿತ ಜನರಲ್ಲಿ ಧೈರ್ಯತುಂಬಿ, ದೇಶಭಕ್ತಿಯ ಭಾಷಣಗಳನ್ನು ಮಾಡಿ ರಾಷ್ಟ್ರನಾಯಕರ ತ್ಯಾಗ, ಬಲಿದಾನಗಳನ್ನು ಹೇಳುತ್ತಾ ಗ್ರಾಮದ ಬೀದಿ ಬೀದಿಗಳಲ್ಲಿ ಸಂಚಾರಿಸಿ ಪ್ರಭಾತ್ ಫೇರಿಯ ಗೀತೆಗಳನ್ನು ಹಾಡುತ್ತಿದ್ದರು.[೬]

"ಕಸ್ತೂರಿ ಬಾಯಿಯವರ ಕಮಲ ದೇವಿಯವರ
ಸರೋಜನಿ ನಾಯ್ಡು ಇವರ್‍ಯಾರ ನಾವು ಚಳುವಳಿ ಮಾಡುವವರ.
ಚಳುವಳಿ ಮಾಡುವವರ ಕೇಳಿದ್ರರ ಹೇಳುವರ
ದೇಶ ಸ್ವರಾಜ್ಯ ತರುವವರ ನಾವು ಚಳುವಳಿ ಮಾಡುವವರ
ಝುಂಡ ಮೆರಿಸುವವರ ನಾವು ದಂಡನು ಗುಡಿಸುವವರ
ಭಂಡೇಂದ ಸರಕಾರ ಓಡಿಸುವವರ ನಾವು ಚಳುವಳಿ ಮಾಡುವರಾ"[೭]

ಹೀಗೆ ಪ್ರಭಾತ್ ಫೇರಿ ಹಾಡಿ ಜನರಲ್ಲಿ ವಿಮೋಚನಾ ಹೋರಾಟದ ಕಿಚ್ಚನ್ನು ತುಂಬುತ್ತಿದರು. ನಿಜಾಂನ ಆಡಳಿತದ ವಿರುದ್ಧ ಹೋರಾಡಲು ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿ ಅನೇಕ ರೀತಿಯ ಚಳುವಳಿಗಳು ನಡೆದವು. ಅನೇಕ ಗ್ರಾಮಗಳಲ್ಲಿ ವಿಮೋಚನಾ ಹೋರಾಟದ ಸಂಘಗಳನ್ನು ಕಟ್ಟಿ ತ್ರಿವರ್ಣ ಧ್ವಜವನ್ನು ಹಾರಿಸುತ್ತಿದರು.

ಧುದನಿ ಶಿಬಿರದ ಕಾರ್ಯಕರ್ತರಾದ ಮಲಕಾಜಪ್ಪ ಜೀವೂರ ಮತ್ತು ಸಂಗಡಿಗರು ಸೇರಿ ನಿಜಾಂನ ಆಡಳಿತದಿಂದ ಬೇಸತ್ತು ನಿಜಾಂನಿಗೆ ಧಿಕ್ಕಾರ ಹಾಕುತ್ತಾ ತಮ್ಮ ಕಂಚಿನ ಕಂಠದಿಂದ ನಿಜಾಂನ ವಿರುದ್ಧ ಹಾಡು ಹೇಳುತ್ತಿದ್ದರು.

"ಅಬ್ ತೋಮ್ ಚಲೇ ಜಾವೂ ಸರಕಾರ
ಅಬ್ ತೋಮ್ ಚಲೇ ಜಾವೂ ಸರಕಾರ
ದೇಶ ಹಮಾರ್ ಏಹೀ ಚರಕಾ ಹೈ
ಭಾರತಕ್ಕೆ ನೇತಾಹ ಗಾಂಧಿ ಹೈ
ಅಬ್ ಜಾವೂ ತೋಮ್ ದರಿಯಾ ಪಾರಾ
ಅಬ್ ತೋಮ್ ಚಲೇ ಜಾವೂ ಸರಕಾರ"೮

ಎಂದು ಹಾಡು ಹೇಳುತ್ತಿದ್ದರು.

ಈಗ ನೀನು ಹೋಗುಬೀಡು ನಿಜಾಂನೇ, ಚರಕಾ ನಮ್ಮ ದೇಶದ ಗುರುತು, ಭಾರತದ ನೇತಾರ ಗಾಂಧೀಜಿಯಾಗಿದ್ದಾರೆ. ಈಗ ನೀನು ಸಮುದ್ರದಾಚೆ ಹೋಗು, ಎಂಬಂಥ ಹಾಡು ಹೇಳುತ್ತಿದರು. ಹೀಗೆ ರಜಾಕಾರರ ಮತ್ತು ನಿಜಾಂ ಪೊಲೀಸರ ಆತ್ಯಾಚಾರಗಳನ್ನು ಬಯಲಿಗೆಳೆದು ವಿರೋಧ ವ್ಯಕ್ತಪಡಿಸುತ್ತಿದ್ದರು.

ಧುದನಿ ಶಿಬಿರದಡಿಯಲ್ಲಿ ಬರುವ ತೆಲ್ಲೂರ ಗ್ರಾಮವು ಭೀಮನದಿಯ ತೀರದ ಗ್ರಾಮವಾಗಿದೆ. ಇಲ್ಲಿ ರಜಾಕಾರರ ಒಂದು ದೊಡ್ಡ ಕ್ಯಾಂಪೊಂದು ಈ ನದಿಯ ದಡದಲ್ಲಿ ಇರುತ್ತಿತ್ತು. ಗಾಣಗಾಪೂರ, ಕಲ್ಲೂರ, ತೆಲ್ಲೂರ, ಹಾಗೂ ಘತ್ತರಗಾ ಗ್ರಾಮಗಳಿಗೆ ದಾಳಿ ಮಾಡಲು ಅನುಕೂಲಕರವಾದ ಸ್ಥಳದಲ್ಲಿ ರಜಾಕಾರರು ಇರುತ್ತಿದ್ದರು. ಪ್ರತಿದಿನ ಪ್ರತಿಯೊಂದು ಊರಿಂದ ಎರಡು ಕುರಿ ಹಾಗೂ ಅವರಿಗೆ ಭೋಗದ ವಸ್ತುಗಳನ್ನು ಒದಗಿಸುವಂತೆ ಗ್ರಾಮದ ಜನತೆಗೆ ಒತ್ತಾಯ ಹಾಕುತ್ತಿದ್ದರು. ನದಿಯ ನೀರಿಗಾಗಿ ಬರುತ್ತಿದ್ದ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡುತ್ತಿದ್ದರು. ರಜಾಕಾರರ ಕೆಟ್ಟ ದೃಷ್ಟಿಯಿಂದ ಮಾನಭಂಗಕ್ಕೆ ಒಳಗಾದ ಎಷ್ಟೋ ಹೆಣ್ಣುಮಕ್ಕಳು ಪ್ರಾಣಕಳೆದುಕೊಂಡರು. ಈ ದುರ್ಘಟನೆಯನ್ನು ದಿನನಿತ್ಯ ಅನುಭವಿಸುತ್ತಿದ್ದ ಸುತ್ತಮುತ್ತಲಿನ ಗ್ರಾಮದ ಜನತೆಗೆ ಸಹಿಸದ ತುತ್ತಾಯಿತು. ಇದರ ಪರಿಹಾರಕ್ಕಾಗಿ ಸಿದ್ಧರಾಮಪ್ಪ ತೆಲ್ಲೂರ, ನಾರಾಯಣರಾವ್ ಗಾಣಗಾಪೂರ, ಚಂದ್ರಶೇಖರ ಬೈರಾಮಡಗಿ, ಗಂಗಪ್ಪ ಹಾಗೂ ಮುಂತಾದ ಯುವಕರು ಸೇರಿ ಒಂದು ಗುಪ್ತ ಸಭೆಯನ್ನು ರಚಿಸಿದರು. ಇದರ ಮುಖಂಡತ್ವವನ್ನು ಗುರುಭೀಮರಾವ ಪಾಟೀಲರು ವಹಿಸಿಕೊಂಡು ರಜಾಕಾರರ ಮೇಲೆ ದಾಳಿ ಮಾಡಿದರು. ಈ ದಾಳಿಯಲ್ಲಿ ಏಳು ಜನ ರಜಾಕಾರರನ್ನು ವಿಮೋಚನಾ ಹೋರಾಟಗಾರರು ಕೊಂದು ಭೀಮಾನದಿಯಲ್ಲಿ ಹಾಕಿದರು. ಕೆಲ ರಜಾಕಾರರು ಹೆದರಿ ಸಿಂದಗಿ ಗ್ರಾಮದ ಕಡೆಗೆ ಓಡಿಹೋದರು. ಹೀಗೆ ರಜಾಕಾರರ ವಿರುದ್ಧ ತಮ್ಮ ಜೀವನ ಹಂಗು ತೊರೆದು ಹೋರಾಡಿ ಅನೇಕ ಗ್ರಾಮಗಳನ್ನು ನಿಜಾಂ ಅನುಯಾಯಿಗಳ ದಬ್ಬಾಳಿಕೆಯಿಂದ ಮುಕ್ತಿಗೊಳಿಸಿದ ಅನುಭವಗಳನ್ನು ಗುರುಭೀಮರಾವ ಪಾಟೀಲರು ಹೇಳುತ್ತಾರೆ. ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಹೋರಾಡಿದ ಕಲಬುರ್ಗಿ ಜಿಲ್ಲೆಯ ಗಡಿಶಿಬಿರವಾದ ಧುದನಿ ಶಿಬಿರದ ನಾಯಕರಾದ

ಗುರುಭೀಮರಾವ್ ಪಾಟೀಲ ಮಧುಗುಣಕಿಯವರ ಮಾರ್ಗದರ್ಶನದಲ್ಲಿ ಶಿವಲಿಂಗಯ್ಯ ಸ್ವಾಮಿ, ಶಿವಲಿಂಗಪ್ಪಾ ಧುತ್ತರಗಿ, ಬಸವಣ್ಣಾ ಜೀವೂರ, ಮಲಕಾಜಪ್ಪಾ ಜೀವೂರ, ಶಿವಶರಣಪ್ಪಾ ಧುತ್ತರಗಿ, ಗಿರಿಮಲ್ಲಪ್ಪ ಸಕ್ಕರಿಗಿ, ಶಿವಶರಣಪ್ಪಾ ಸಕ್ಕರಗಿ, ಸಿದ್ದಪ್ಪ ಕಣ್ಣಿ, ಗುರುಲಿಂಗಪ್ಪ ನಿಂಬಾಳ, ಬಸವಣ್ಣಪ್ಪ ಬುಕ್ಕಾ, ಮಲ್ಲಪ್ಪಾ ನಿಂಬಾಳ, ಚನ್ನಬಸಪ್ಪಾ ಭದ್ರೆ ಇಟ್ಟಪ್ಪ ಅಫಜಲಪೂರ, ತುಕ್ಕಪ್ಪ ಪ್ಯಾಟೆ, ಶಿವಗೌಡಪ್ಪ ಮಣ್ಣೂರ, ಶರಣಪ್ಪ ದೊಡ್ಡಮನಿ, ಹಸನಪ್ಪ ದೊಡ್ಡಮನಿ, ಗೌವಪ್ಪ ದೊಡ್ಡಮನಿ ಮುಂತಾದವರು ಕಾರ್ಯಕರ್ತರಾಗಿ ಸೇವೆಸಲ್ಲಿಸಿದರು. ಪಠಾಣರ ಹಾಗೂ ರಜಾಕಾರರ ದಬ್ಬಾಳಿಕೆಯಿಂದ ಜನರನ್ನು ರಕ್ಷಿಸಲು ಹಗಲಿರುಳು ದುಡಿದು ತಮ್ಮ ದೇಶಪ್ರೇಮವನ್ನು ತೋರಿದರು.

## ೩.೪. ಗೌಡಗಾಂವ ಶಿಬಿರ

"ಧುದನಿ'' ಶಿಬಿರದಂತೆ "ಗೌಡಗಾಂವ'' ಎಂಬಲ್ಲಿಯೂ ಒಂದು ಶಿಬಿರವನ್ನು ವಿಮೋಚನಾ ಹೋರಾಟಗಾರರು ಸಂಘಟಿಸಿದರು. ಈ ಶಿಬಿರವು ಅಫಜಲಪೂರ ತಾಲ್ಲೂಕಿನ ಮಧ್ಯದಲ್ಲಿ ಬರುವ ಸ್ಟೇಷನ್ ಗಾಣಗಾಪೂರದ ಹತ್ತಿರವಿದೆ. ಇದರ ನೇತೃತ್ವವನ್ನು ಭೈರಪ್ಪ ಪಾಟೀಲ ಭೂಸನೂರು ಮತ್ತು ಧರ್ಮವೀರ ಸೂರ್ಯವಂಶಿಯವರು ವಹಿಸಿದ್ದರು. ಕುಸುಮಾಕರ ದೇಸಾಯಿ, ಅಪ್ಪಾರಾವ ಪಾಟೀಲ ಮಹಾಗಾಂವ ಮುಂತಾದ ಕ್ರಿಯಾಶೀಲ ಕಾರ್ಯಕರ್ತರು ಈ ಶಿಬಿರದಲ್ಲಿ ಪಾಲ್ಗೊಂಡಿದ್ದರು. ೧೯೪೮ರ ಆಗಸ್ಟ್ ತಿಂಗಳಲ್ಲಿ ತಿರುಚಾಕಿನ ಚೋಳ ಮತ್ತು ಜಂಬಗಿ ಗ್ರಾಮದಲ್ಲಿ ಅನೇಕ ವಿಮೋಚನಾ ಹೋರಾಟಗಾರರು ಸಭೆ ಸೇರಿದ್ದರು. ಗೌಡಗಾಂವ ಶಿಬಿರದಲ್ಲಿ ನೂರಕ್ಕೂ ಹೆಚ್ಚು ಸಂಖ್ಯೆಯಲ್ಲಿದ್ದ ಶಿಬಿರದ ಕಾರ್ಯಕರ್ತರಲ್ಲಿ ಅನೇಕರು ಉಗ್ರವಾದಿ ಧೋರಣೆಗಳನ್ನು ಹೊಂದಿದ್ದರು.[೯] ಈ ಶಿಬಿರವು ತನ್ನ ಸುತ್ತಮುತ್ತಲಿನ ಸುಮಾರು ಇಪ್ಪತ್ತು ಕಿಲೋ ಮೀಟರ್ ದೂರದವರೆಗೆ ತನ್ನ ನಿಯಂತ್ರಣವನ್ನು ಸಾಧಿಸಿತ್ತು.

ಗಜಾನನ ದೇವಲ್‌ಗಾಣಗಾಪೂರ್, ದತ್ತಾತ್ರೇಯ, ಶಾಂತಪ್ಪ ಕಡಗಂಚಿ, ಚಂದ್ರಶೇಖರ ಭೈರಾಮಡಗಿ, ತುಕ್ಕಪ್ಪ ಪ್ಯಾಟೆ, ಮುಂತಾದ ಯುವಕರು ಪ್ರಾಣಭಯವನ್ನು ತೊರೆದು ರಜಾಕಾರರ ವಿರುದ್ಧ ಹೋರಾಡಿದ್ದರು. ಗೌಡಗಾಂವ ಶಿಬಿರದ ಕಾರ್ಯಕರ್ತರು ಗಾಣಗಾಪೂರ ಸ್ಟೇಷನ್ ಹತ್ತಿರ ಇದ್ದ ನಿಜಾಂ ಪೊಲೀಸ್ ಠಾಣೆಯನ್ನು ಹಾಗೂ ಕಂದಾಯ ಇಲಾಖೆಯನ್ನು ಲೂಟಿಮಾಡಿದರಲ್ಲದೆ, ಕೋಗನೂರ್, ಬೈರಾಮಡಗಿ, ದಿಗ್ಗಸಂಗಿ, ನೀಲೂರ್, ಗ್ರಾಮಗಳಿಗೆ ಹೋಗಿ ಅಲ್ಲಿದ್ದ ರಜಾಕಾರರ ಗೂಢಚಾರಿಗಳನ್ನು ಸೆರೆಹಿಡಿದು ಕೊಂದುಹಾಕಿದರು. ಆಗ ನಿಜಾಂನ ದೃಷ್ಟಿಯಲ್ಲಿ ಈ ಹೋರಾಟಗಾರರು ಉಗ್ರಗಾಮಿಗಳಾಗಿ ಕಾಣಿಸುತ್ತಾರೆ. ೧೯೪೮ಲ ಸೆಪ್ಟೆಂಬರ್ ತಿಂಗಳಲ್ಲಿ ನಿಂಬರ್ಗ, ಮಾಡ್ಯಾಳ, ಯಳಸಂಗಿ ಮುಂತಾದ ಕಡೆ ನಿಜಾಂನ ಪೊಲೀಸ್ ಠಾಣೆ ಮತ್ತು ಕಂದಾಯ ಕಛೇರಿಗಳಿಗೆ ಬೆಂಕಿಯಿಟ್ಟರು. ಈ ಹೋರಾಟದ

ಸ್ವರೂಪವನ್ನು ಅರಿತ ನಿಜಾಂ ಸೈನಿಕರು ಧಿಕ್ಕಾಪಾಲಾಗಿ ಓಡಿಹೋದರು. ಆದರೂ ಛಲಬಿಡದೆ ವಿಮೋಚನಾ ಹೋರಾಟಗಾರರು ಪಠಾಣರನ್ನು ಹುಡುಕಿ ಕೊಂದುಹಾಕಿದರು.. ಮತ್ತೊಂದು ಕಡೆ ನಿಜಾಂ ಸೈನಿಕರು ಹಾಗೂ ರಜಾಕಾರರು ಸೇರಿ ಗೌಡಗಾಂವ ಶಿಬಿರಾರ್ಥಿಗಳನ್ನು ಸೆರೆ ಹಿಡಿಯಲು ಹೊಂಚು ಹಾಕುತ್ತಿದ್ದರು. ಈ ಸುದ್ದಿ ತಿಳಿದ ಭೂಸನೂರ ಭೈರಪ್ಪ ಪಾಟೀಲ, ಅಫಜಲಪೂರದ ಧರ್ಮವೀರ ಸೂರ್ಯವಂಶಿ ಮತ್ತು ಕಲಬುರ್ಗಿಯ ಕುಸುಮಾಕರ್ ದೇಸಾಯಿಯವರೂ ಮುಂತಾದ ಯುವಕರು ನಿಜಾಂ ಸೈನ್ಯದ ವಿರುದ್ಧ ಹೋರಾಡಲು ಮುಂದಾದರು. ಅದರಲ್ಲಿ ಕೆಲವರು ನಿಜಾಂ ಪೊಲೀಸ್‌ರಿಂದ ಸೆರೆಮನೆವಾಸ ಅನುಭವಿಸಿದರೆ ಮತ್ತೆ ಕೆಲವರು ಪ್ರಾಣ ಕಳೆದುಕೊಂಡರು. ಪ್ರಾಣ ಕಳೆದುಕೊಂಡವರಲ್ಲಿ ಮಹಾಗಾಂವದ ಅಪ್ಪಾರಾವ್ ಪಾಟೀಲರು ಒಬ್ಬರು. 

ಗೌಡಗಾಂವ ಶಿಬಿರದ ಸಮೀಪದ ಗ್ರಾಮಗಳಾದ ಸ್ಟೇಷನ್ ಗಾಣಗಾಪುರ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನತೆಗೆ ರಜಾಕಾರರು ತೊಂದರೆಗಳನ್ನು ಕೊಡುತ್ತಿದ್ದರು. ಹಾಗೂ ಮುಂಬೈ ಮತ್ತು ಮದ್ರಾಸಿನಿಂದ ಬರುವ ರೈಲುಗಳನ್ನು ಮಧ್ಯನಿಲ್ಲಿಸಿ ಪ್ರಯಾಣಿಕರನ್ನು ಹೆದರಿಸಿ ಹಣ ಮತ್ತು ಆಭರಣಗಳನ್ನು ರಜಾಕಾರರು ದೋಚುತ್ತಿದ್ದರು. ಹಾಗೂ ಕೆಲ ಹೆಣ್ಣುಮಕ್ಕಳ ಮೇಲೆ ಮಾನಭಂಗ ಮಾಡಿ ಅವರ ಪ್ರಾಣ ತೆಗೆಯುತ್ತಿದ್ದರು. ಇಂತಹ ಘಟನೆಗಳು ಈ ಭಾಗದಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿ ನಡೆದವು. ಗೌಡಗಾಂವ ಗ್ರಾಮದ ಜನತೆಯನ್ನು ರಜಾಕಾರರು ಅನೇಕ ರೀತಿಯಲ್ಲಿ ಹಿಂಸಿಸುತ್ತಿದ್ದರು. ಗೌಡಗಾಂವ, ಬೈರಾಮಡಗಿ ಹಾಗೂ ಬೆಣ್ಣೆಸೂರ ಗ್ರಾಮಗಳ ಜನರು ಪಠಾಣರಿಗೆ ಹೆದರಿ ಬೇರೆ ಕಡೆ ವಲಸೆ ಹೋಗಲು ಪ್ರಾರಂಭಿಸಿದರು. ಈ ಗ್ರಾಮಗಳ ಜನರ ರಕ್ಷಣೆಗಾಗಿ ಗೌಡಗಾಂವ ಶಿಬಿರದ ಮುಖಂಡರಾದ ಭೈರಪ್ಪ ಪಾಟೀಲರು ಒಂದು ತಂಡವನ್ನು ರಚಿಸಿದರು. ಅದರಲ್ಲಿ ವೀರಯ್ಯ ಸ್ಟೇಷನ್ ಗಾಣಗಾಪೂರ, ಚಂದ್ರಶೇಖರ ಭೈರಾಮಡಗಿ, ಶಿವಪ್ಪ ಭೂಸನೂರ, ಗುರುಶಾಂತಪ್ಪ ಭೂಸನೂರ, ಮುಂತಾದ ಗೌಡಗಾಂವ ಶಿಬಿರದ ಕಾರ್ಯಕರ್ತರು ಸೇರಿ ರಜಾಕಾರರ ಕ್ಯಾಂಪುಗಳನ್ನು ಪತ್ತೆಹಚ್ಚಿದರು. ಆದರೆ ಅವರ ಮೇಲೆ ದಾಳಿಮಾಡಲು ಶಸ್ತ್ರಾಸ್ತ್ರಗಳ ಕೊರತೆಯಿಂದ ಅವರನ್ನು ಎದುರಿಸಲು ಅಸಕ್ತರಾದರು. ಶಿಬಿರದ ಶಿಬಿರಾಧಿಪತಿಯಾದ ಭೈರಪ್ಪ ಪಾಟೀಲರು ಕೊಲ್ಲೂರು ಮಲ್ಲಪ್ಪನವರಿಗೆ ಗುಪ್ತಚಾರರಿಂದ ಪತ್ರ ವ್ಯವಹಾರದ ಮೂಲಕ ವಿಷಯ ತಿಳಿಸಿ ಶಸ್ತ್ರಾಸ್ತ್ರಗಳನ್ನು ತರಿಸಿಕೊಂಡರು. ಅನೇಕ ಬಂದೂಕು ಹಾಗು ಕೈಬಾಂಬುಗಳನ್ನು ಸಂಗ್ರಹಿಸಿ ರಜಾಕಾರರ ಮೇಲೆ ಶಿಬಿರದ ಕಾರ್ಯಕರ್ತರು ದಾಳಿ ಮಾಡಿದರು. ಈ ದಾಳಿಯಲ್ಲಿ ಒಂಬತ್ತು ಜನ ರಜಾಕಾರರು ತಮ್ಮ ಪ್ರಾಣವನ್ನು ಕಳೆದುಕೊಂಡರು. ಸತತವಾಗಿ ಎರಡು ಗಂಟೆಗಳ ಕಾಲ ಗುಂಡಿನ ಸುರಿಮಳೆಯನ್ನು ನಡೆಸಿದರು. ರಜಾಕಾರರ ಗುಂಡಿಗೆ ಗೌಡಗಾಂವ ಶಿಬಿರದ ಕಾರ್ಯಕರ್ತರಾದ

ಬಸಣಗೌಡ, ಹಾಗೂ ಮಲ್ಲಣ ದಸ್ತಿ ಎನ್ನುವರು ಬಲಿಯಾದರು. ಚೌಡಪೂರ, ಅತನೂರ, ಗ್ರಾಮಗಳಲ್ಲಿ ನಿಜಾಂನ ಕಂದಾಯ ಕಛೇರಿಯಲ್ಲಿದ್ದ ಮೂರು ಸಾವಿರ ರೂಪಾಯಿ ವಶಪಡಿಸಿಕೊಂಡು ಗೌಡಗಾಂವ ಶಿಬಿರದ ಖರ್ಚು ವೆಚ್ಚಕ್ಕೆ ಉಪಯೋಗಿಸಿಕೊಂಡರು. ರಜಾಕಾರರ ಕಪಿಮುಷ್ಠಿಯಲ್ಲಿದ್ದ ಮಾಡ್ಯಾಳ, ಯಳಸಂಗಿ, ಬೆಣ್ಣೆಸೂರ, ನಿಂಬಾಳ ಮುಂತಾದ ಗ್ರಾಮಗಳನ್ನು ಮುಕ್ತಿಗೊಳಿಸಿದರು. ಈ ಶಿಬಿರದಲ್ಲಿ ಹಿಂದೂ ಕಾರ್ಯಕರ್ತರಲ್ಲದೇ ಮುಸ್ಲಿಂ ಕಾರ್ಯಕರ್ತರಾದ ಕರಿಂಸಾಬ, ಮಹ್ಮದ ಅಲಿ, ಸೇರಿ ನಿಜಾಂನ ದಬ್ಬಾಳಿಕೆಯನ್ನು ಎದುರಿಸಿದರು.[೧೦]

### ೩.೫. ವಾಗ್ದರಿಗಿ ಶಿಬಿರ

ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆ, ಅಕ್ಕಲಕೋಟೆ ತಾಲೂಕಿನಲ್ಲಿರುವ ವಾಗ್ದರಿಗಿ ಗ್ರಾಮದಲ್ಲಿ, ರಜಾಕಾರರ ಹಿಂಸೆಗಳನ್ನು ತಾಳಲಾರದೆ ಅಲ್ಲಿನ ಜನತೆಯ ಒತ್ತಾಯದ ಮೇರೆಗೆ ಈ ವಾಗ್ದರಗಿ ಶಿಬಿರ ಹುಟ್ಟಿಕೊಂಡಿತು. ಆಡಳಿತದಿಂದ ಕಂಗೆಟ್ಟು ಅಲ್ಲಿಯ ಜನರಲ್ಲಿ ಧೈರ್ಯತುಂಬಲು, ಕೇವಲ ಅಲ್ಪಸಂಖ್ಯೆಯ ವ್ಯಕ್ತಿಗಳಿಂದ ಆರಂಭವಾದ ಈ ಶಿಬಿರವು ದಿನೇ ದಿನೇ ಹೋರಾಟಗಾರರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಾ ಹೋಯಿತು. ಬಾಬಾಸಾಹೇಬ ಪರಾಂಜಿ ಅವರ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದ ಈ ಶಿಬಿರಕ್ಕೆ ಗೋಪಾಲದೇವಶಾಸ್ತ್ರಿ ಎಂಬುವವರು ಅಧಿಪತಿಗಳಾಗಿದ್ದರು. ಇವರು ೧೯೪೭ರಲ್ಲಿ ರಜಾಕಾರರು "ಹಿರೋಲಿ" ಗ್ರಾಮದ ಮೇಲೆ ದಾಳಿಮಾಡಿದಾಗ, ಪ್ರತಿ ಹೋರಾಟದ ನಡೆಸಿದ ಈ ಶಿಬಿರದವರು ರಜಾಕಾರರನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸಿದರು. ಆ ಸಂದರ್ಭದಲ್ಲಿ ಗೋಪಾಲ ದೇವಶಾಸ್ತ್ರಿ ಅವರು ಕೈಬಾಂಬ್ ಸ್ಪೋಟದಿಂದಾಗಿ ಗಾಯಾಳುವಾಗುತ್ತಾರೆ. ಆಗ ಶಿಬಿರವನ್ನು ಮುನ್ನಡೆಸಿಕೊಂಡು ಹೋಗಲು ಅಣ್ಣಾರಾವ್ ಪಾಟೀಲ ಎಂಬುವವರನ್ನು ಸರ್ವಾನುಮತದಿಂದ ಆಯ್ಕೆ ಮಾಡಿಕೊಂಡ ಶಿಬಿರದ ಕಾರ್ಯಕರ್ತರು ಅವರ ಮೂಲಕ ಸ್ಫೂರ್ತಿ ಪಡೆದು ಹೋರಾಟದ ರೂಪರೇಷಗಳನ್ನು ತಯಾರಿಸಿಕೊಂಡರು. ವಾಗ್ದರಿಗಿ ಗ್ರಾಮದ ಸುತ್ತಮುತ್ತಲಿನ ಗ್ರಾಮಗಳ ಜನತೆಯ ನೋವುಗಳನ್ನು ಕಂಡುಂಡ ಇವರು ಜನತೆಯ ಸಹಕಾರದಿಂದ ಉಗ್ರಸ್ವರೂಪದ ಹೋರಾಟ ನಡೆಸಿದರು.

ಒಮ್ಮೆ ಆಳಂದ ಗ್ರಾಮದ ಶ್ರೀ ಆಂಜನೇಯಸ್ವಾಮಿಯ ಜಾತ್ರಾ ಮಹೋತ್ಸವದಲ್ಲಿ ರಜಾಕಾರರು ಹಲ್ಲೆ ನಡೆಸಿ ದೇವರ ಪಲ್ಲಕ್ಕಿಗೆ ಬೆಂಕಿ ಹಚ್ಚುತ್ತಾರೆ. ಇದರಿಂದ ರೊಚ್ಚಿಗೆದ್ದ ಜನರು ರಜಾಕಾರರನ್ನು ಹಿಡಿದು ಹೊಡೆಯುತ್ತಾರೆ. ಅಲ್ಲದೆ ನಿಜಾಂ ಪೊಲೀಸ್‌ರನ್ನು ಸೆರೆಹಿಡಿದು ಅವರಲ್ಲಿದ್ದ ಬಂದೂಕುಗಳನ್ನು ವಶಪಡಿಸಿಕೊಳ್ಳುತ್ತಾರೆ. ಆಗ ಆಳಂದ ಗ್ರಾಮವನ್ನು ಸ್ವತಂತ್ರ್ಯಗ್ರಾಮವೆಂದು ಘೋಷಿಸಿಕೊಳ್ಳುತ್ತಾರೆ.

ಆದರೂ ರಜಾಕಾರರು ಹಾಗೂ ನಿಜಾಂ ಆಡಳಿತ ಅಧಿಕಾರಿಗಳು ಆಳಂದ ಗ್ರಾಮದ ಮೇಲೆ ತಮ್ಮ ಅಧಿಕಾರವನ್ನು ನಡೆಸಲು ಪ್ರಯತ್ನಿಸುತ್ತಾರೆ. ಆಗ ಅಣ್ಣಾರಾವ್ ಪಾಟೀಲರ ತಂದೆ ವೀರಭದ್ರಪ್ಪನವರನ್ನು ರಜಾಕಾರರು ಸೆರೆಹಿಡಿಯುತ್ತಾರೆ. ಆದರೆ ಇಂತಹ ಕ್ರಮಗಳಿಂದ ಜನರಲ್ಲಿ ಇನ್ನೂ ಹೆಚ್ಚಿನ ಕ್ರೋಧ ಉಕ್ಕಿ ಅನಾಹುತವಾಗುತ್ತದೆ ಎಂಬ ದೃಷ್ಟಿಯಿಂದ ಹಾಗೂ ತನ್ನ ಅಧಿಕಾರವನ್ನು ಉಳಿಸಿಕೊಳ್ಳುವಗೋಸ್ಕರ ಪೋಲೀಸ್ ಅಧಿಕಾರಿಯಾದ ರಜವಿಯೇ ವೀರಭದ್ರಪ್ಪನವರನ್ನು ಬಿಡುಗಡೆಗೊಳಿಸುತ್ತಾನೆ. ಶಿಬಿರದಲ್ಲಿದ್ದ ಶಂಕರಶೆಟ್ಟಿ ಪಾಟೀಲರು ಗುರುನಾಥರಾವ್, ದಿಗಂಬರ ಕತಾರೆ, ಮಾರುತಿರಾವ್ ಬುಲಬುಲ್ಲೆ ಅವರು ಅಣ್ಣಾರಾವ್ ಪಾಟೀರನ ಜೊತೆ ಸೇರಿ ಜನತೆಯ ಕುಂದುಕೊರತೆಗಳ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಳ್ಳುತ್ತಿದ್ದರು. ಈ ಶಿಬಿರದ ಕೆಲ ಯುವಕರು ಶಸ್ತ್ರಾಸ್ತ್ರ ತರಬೇತಿ ಪಡೆದುಕೊಂಡಿದ್ದರು. ಅದರ ಸಹಾಯದಿಂದ ಗಾಣಗಾಪೂರ ಹಾಗೂ ಸರಸಂಭ ಗ್ರಾಮಗಳು ರಜಾಕಾರರಿಂದ ಸ್ವತಂತ್ರ್ಯಗೊಂಡವು. ನಿಜಾಂ ಸರಕಾರದ ಕಛೇರಿಗಳ ಮೇಲೆ ದಾಳಿ ಮಾಡಿ ಅವುಗಳನ್ನು ನಾಶಗೊಳಿಸಿದರು. ಅಲ್ಲದೆ ಆಳಂದ ಹಾಗೂ ಬಾಲ್ಕಿ ಗ್ರಾಮಗಳಲ್ಲಿದ್ದ ಈಚಲ ಮರಗಳನ್ನು ಕಡಿಯುವ ಚಳುವಳಿಯನ್ನು ವಾಗ್ದರಿಗಿ ಶಿಬಿರದ ಶಿಬಿರಾರ್ಥಿಗಳು ಕೈಗೊಂಡಿದ್ದರು. ಕೆಲದಿನ ಕಾಲ ಅಣ್ಣಾರಾವ್ ವೀರಭದ್ರಪ್ಪ ಪಾಟೀಲರು ಖಂಡಾಳಕ್ಕೆ ಹೋಗಿ, ಅಲ್ಲಿಂದ ಅಕ್ಕಲಕೋಟೆ, ಸೊಲ್ಲಾಪುರ ಭಾಗಗಳಲ್ಲಿ ಸಂಚರಿಸಿ ಶಸ್ತ್ರಾಸ್ತ್ರಗಳ ತರಬೇತಿಯನ್ನು ಪಡೆದುಕೊಂಡರು. ವಾಗ್ದರಿಗಿ ಗಡಿಭಾಗಗಳಲ್ಲಿ ರಜಾಕಾರರ ಕ್ರೂರ ವರ್ತನೆಗೆ ತತ್ತರಿಸಿದ ಜನತೆ ಕಣ್ಣೀರಿಡುತ್ತಿದ್ದರು. ಆಗ ಅಣ್ಣಾರಾವ್ ಪಾಟೀಲರು ತಮ್ಮ ಶಿಬಿರದ ಯುವಕರನ್ನು ಒಂದುಗೂಡಿಸಿ ಸರಸಂಭ, ಸಕ್ಕರಗಿ, ಮೋಘ, ತಡಕಲ, ಒಟ್ಟು ೬೬ ಗ್ರಾಮಗಳನ್ನು ರಜಾಕಾರರ ದಬ್ಬಾಳಿಕೆಯಿಂದ ಮುಕ್ತಿಗೊಳಿಸಿದರು. ಹಾಗೂ ಪ್ರತಿಯೊಂದು ಹಳ್ಳಿಗೂ ಹೋಗಿ ಜನರಲ್ಲಿ ನಿಜಾಮನ ವಿರುದ್ದ ಅಸಹಕಾರ ಚಳುವಳಿಯನ್ನು ಮಾಡಲು ಪ್ರೋತ್ಸಾಹಿಸಿದರು.

ಅಣ್ಣಾರಾವ ಪಾಟೀಲರ ತಮ್ಮ ಗಿರಿಪ್ಪಾ ಪಾಟೀಲರು ಎಲೆ ಮರೆಯ ಕಾಯಿಯಂತೆ ರಜಾಕಾರರ ವಿರುದ್ದ ಹೋರಾಡಿದರು. ಅಣ್ಣನ ಮಾರ್ಗದರ್ಶನದಲ್ಲಿ ವಾಗ್ದರಿಗಿ ಶಿಬಿರದಲ್ಲಿ ಕಾರ್ಯನಿರ್ವಹಿಸುತ್ತಿದ್ದನು. ೧೯೪೨ರಲ್ಲಿ ಬ್ರಿಟಿಷ ಹಾಗೂ ನಿಜಾಂ ಸರಕಾರದ ವಿರುದ್ಧ ಘೋಷಣೆ ಕೂಗಿ, ಅನೇಕ ಸಲ ಜೈಲುವಾಸ ಅನುಭವಿಸಿದರು. ಗಿರಿಪ್ಪಾ ಪಾಟೀಲರು ಗಡಿಶಿಬಿರಗಳಲ್ಲಿ ಗುಪ್ತವಾಗಿ ಕರಪತ್ರಗಳನ್ನು ಒಂದು ಶಿಬಿರದಿಂದ ಇನ್ನೊಂದಕ್ಕೆ ರವಾನಿಸುತ್ತಿದ್ದರು. ಅಣ್ಣಾರಾವ ಪಾಟೀಲರು ಗೋವಾ, ಮುಂಬೈಯಿಂದ ಮದ್ದುಗುಂಡುಗಳನ್ನು ತರಿಸಿ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳಿಗೆ ಗುಪ್ತವಾಗಿ ಕಳಿಸುತ್ತಿದ್ದರು. ಹಾಗೂ ಸತಾರದ ನಾನಾಪಾಟೀಲ್‌ರನ್ನು ಭೇಟಿಯಾಗಿ ರೈಫಲ್, ಬಂದೂಕು ಹಾಗೂ ಖಡ್ಗಗಳನ್ನು ತರಿಸಿ ವಾಗ್ದರಿಗಿ ಶಿಬಿರದಲ್ಲಿ ಸಂಗ್ರಹಿಸಿಕೊಳ್ಳುತ್ತಿದ್ದರು. ಸಂಗ್ರಹಿಸಿಟ್ಟ ಶಸ್ತ್ರಾಸ್ತ್ರಗಳನ್ನು ಗಡಿಶಿಬಿರದ

ಪ್ರಮುಖ ಹೋರಾಟಗಾರಿಗೆ ಕಳಿಸಿಕೊಡಲಾಗುತ್ತಿತ್ತು. ಗಡಿ ಶಿಬಿರಗಾರರು ಪ್ರತಿ ಗ್ರಾಮಗಳಿಗೆ ಹೋಗಿ ಅಲ್ಲಿನಡೆದ ಘಟನೆಗಳ ಬಗ್ಗೆ ತಿಳಿದು ಗ್ರಾಮದ ಮುಖಂಡರಿಗೆ ಶಸ್ತ್ರಾಸ್ತ್ರಗಳನ್ನು ಕೊಟ್ಟು ರಜಾಕಾರರಿಂದ ಜನತೆಯನ್ನು ಕಾಪಾಡಲು ಹೇಳುತ್ತಿದ್ದರು. ಈ ಶಿಬಿರದಲ್ಲಿದ್ದ ಕಾರ್ಯಕರ್ತರಿಗೆ ಊಟದ ವ್ಯವಸ್ಥೆಗಾಗಿ ಶಿಬಿರದ ಸುತ್ತಮುತ್ತಲಿನ ಗ್ರಾಮದ ಜನತೆ ಸಹಾಯ ಮಾಡುತ್ತಿದ್ದರು.[೧೦]

ಹಿರೋಳಿ, ಕೆರೂರ, ಶಿರೂರ, ಕಾಮನಳ್ಳಿ, ನಾಗೂರ, ಅನೇಕ ಹಳ್ಳಿಗಳನ್ನು ರಜಾಕಾರರ ದಬ್ಬಾಳಿಕೆಯಿಂದ ವಿಮುಕ್ತಿಗೊಳಿಸಿದ ಕೀರ್ತಿ ವಾಗ್ದರಿಗಿ ಶಿಬಿರದ ಕಾರ್ಯಕರ್ತರಿಗೆ ಸಲ್ಲುತ್ತದೆ. ಈ ರೀತಿಯಾಗಿ ವಾಗ್ದರಿಗಿ ಶಿಬಿರದ ಮುಖಂಡನಾದ ಅಣ್ಣಾರಾವ್ ಪಾಟೀಲರ ಮಾರ್ಗದರ್ಶನದಲ್ಲಿ ನಡೆದ ಕಾರ್ಯಚರಣೆಗಳು ಯಶಸ್ವಿಗೊಳ್ಳುತ್ತಾ ನಡೆದವು. ಈ ಶಿಬಿರದ ಕಾರ್ಯಕರ್ತರು ನಿಜಾಂ ಸರಕಾರ ಹಾಗೂ ರಜಾಕಾರರಿಗೆ ಸಿಂಹ ಸ್ವಪ್ನರಾದರು. ಇದರಿಂದ ಕೋಪಗೊಂಡ ನಿಜಾಂ ಪೋಲೀಸ್ ಅಧಿಕಾರಿಯಾದ ಮಹಮ್ಮದ ರಜಕಾ ಎಂಬುವವನ್ನು ಪಾಟೀಲರ ಮನೆಯ ಮೇಲೆ ದಾಳಿಮಾಡಿ, ಮನೆಯಲ್ಲಿದ್ದ ಎಲ್ಲಾ ಸಾಮಾನುಗಳನ್ನು ಕೆಲದಿನಗಳ ಕಾಲ ತನ್ನ ವಶದಲ್ಲಿಟ್ಟುಕೊಂಡ. ಪಾಟೀಲರ ಮನೆಯ ಸದಸ್ಯರನ್ನು ಮನೆಯಿಂದ ಹೊರಹಾಕಿ ಆ ಮನೆಯಲ್ಲಿ ತಾನು ವಾಸಮಾಡತೊಡಗಿದ. ಈ ಘಟನೆ ಕಂಡ ಕೇಸರಜವಳಗಾ ಶಿಬಿರದ ಕಾರ್ಯಕರ್ತರಾದ ಬಸವಣ್ಣಪ್ಪ ಹಾಗೂ ಸಿದ್ಧರಾಮಪ್ಪನವರು ವಾಗ್ದರಿಗಿ ಶಿಬಿರಕ್ಕೆ ಧಾವಿಸಿ ಪಾಟೀಲರಿಗೆ ವಿಷಯ ತಿಳಿಸಿದರು. ಅಣ್ಣಾರಾವ್ ಪಾಟೀಲ ಹಾಗೂ ಅಮೃತಪ್ಪಾ ಅನೇಕರು ಸೇರಿ ಮಧ್ಯರಾತ್ರಿ ವೇಳೆಗೆ ಆಳಂದ ಗ್ರಾಮ ತಲುಪಿದರು. ಮನೆಯಲ್ಲಿದ್ದ ನಿಜಾಂ ಪೊಲೀಸ್ ಅಧಿಕಾರಿಯನ್ನು ಹೊಡೆದು ಅವನಲ್ಲಿದ್ದ ಬಂದೂಕು ಹಾಗೂ ಕುದುರೆಗಳನ್ನು ವಶಪಡಿಸಿಕೊಂಡರು. ಹೊಡೆತ ತಿಂದ ನಿಜಾಂ ಪೊಲೀಸರು ಓಡಿಹೋದರು. ಹೀಗೆ ವಾಗ್ದರಿಗಿ ಶಿಬಿರದ ಕಾರ್ಯಕರ್ತರು ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿದರು.

### ೩.೬. ಸಿಂದಗಿ ಶಿಬಿರ

ಧುದನಿ, ಗೌಡಗಾಂವ, ವಾಗ್ದರಿಗಿ ಗಡಿಶಿಬಿರಗಳಂತೆ ಕಲಬುರ್ಗಿ ಜಿಲ್ಲೆಯ ಗಡಿಭಾಗದಲ್ಲಿ ಸಿಂದಗಿ ಶಿಬಿರವನ್ನು ಸ್ಥಾಪಿಸಲಾಗಿತ್ತು. ಪ್ರಸ್ತುತ್ತ ಸಿಂದಗಿ ಎಂಬ ಊರು ವಿಜಾಪುರ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದೆ. ಈ ಪ್ರದೇಶವು ಮೊದಲು ಹೈದರಾಬಾದ್ ಪ್ರಾಂತ್ಯದಲ್ಲಿದ್ದು ರಜಾಕಾರರ ಹಾವಳಿಗೆ ತುತ್ತಾಗಿತ್ತು. ಈ ಶಿಬಿರದ ಮುಖಂಡತ್ವವನ್ನು ಸರದಾರ್ ಶರಣಗೌಡ ಪಾಟೀಲ್ ಇನಾಂದಾರ್ ವಹಿಸಿಕೊಂಡರು. ಬಸವಂತರಾವ್ ಗುರುಮಿಟಕಲ್, ಚನ್ನಬಸಪ್ಪ ಕುಳಗೇರಿ, ಮುಖ್ತೇದಾರ್ ದಾಸ್‌ರಾವ್, ಮುಂತಾದ ಧೀರನಾಯಕರು ಈ ಶಿಬಿರದ ಕಾರ್ಯಕರ್ತರಾಗಿ ಕೆಲಸ ಮಾಡಿದರು. ಈ ಶಿಬಿರದಲ್ಲಿ ೨೫ ಕುದುರೆಗಳು ಹಾಗೂ ಮೂರು ಜೀಪುಗಳು ಶಿಬಿರಾರ್ಥಿಗಳ ಉಪಯೋಗಕ್ಕಾಗಿ

ಇದ್ದವು. ಸಿಂದಗಿ ಶಿಬಿರದ ಮುಖಂಡರಾದ ಶರಣಗೌಡರು ಗಡಿಭಾಗಗಳಲ್ಲಿ ಸಂಚಾರಿಸಿ ಅನೇಕ ಗ್ರಾಮಗಳಿಗೆ ಭೇಟಿಕೊಟ್ಟು ಜನತೆಯ ಸುಖಃದುಖಃಗಳನ್ನು ವಿಚಾರಿಸುತ್ತಿದ್ದರು. ಕಕ್ಕಳಮೇಲಿ, ಮೂಡಬಾಳ, ಹಡಗಲಿ, ಹಾಗೂ ಭೂಟನೂರು ಗ್ರಾಮಗಳ ಮೇಲೆ ರಜಾಕಾರರು ಅತಿಯಾದ ದಬ್ಬಾಳಿಕೆಯನ್ನು ನಡೆಸುತ್ತಿದ್ದರು. ಆಗ ಈ ಗ್ರಾಮದ ಜನತೆಗೆ ಧೈರ್ಯ ಹೇಳಿ ಶರಣಗೌಡರು, ಮಲ್ಲಪ್ಪ ಹರಿಜನ, ಅಚ್ಚಪ್ಪಗೌಡ, ಬಸವಣ್ಣಪ್ಪ ಆಂದೋಲ ಮುಂತಾದ ನಾಯಕರು ಸೇರಿ ರಜಾಕರರ ಮೇಲೆ ದಾಳಿ ಮಾಡಿದರು. ಈದಾಳಿಯಲ್ಲಿ ಒಬ್ಬ ರಜಾಕಾರನು ಪ್ರಾಣಕಳೆದುಕೊಂಡನು. ಇನ್ನುಳಿದ ರಜಾಕಾರರು ಧುದನಿ ಶಿಬಿರದ ಕಡೆ ಓಡಿಹೋದರು. ಇದೇ ರೀತಿ ಜೇವರ್ಗಿ, ಸುರಪುರ, ಶಹಾಪುರ ತಾಲ್ಲೂಕುಗಳಲ್ಲಿ ರಜಾಕಾರರ ಹುಟ್ಟಡಗಿಸಲು ಶರಣಗೌಡರು ಮುಂದಾದರು. ಸಿಂದಗಿ ಶಿಬಿರದ ಶಿಬಿರಾರ್ಥಿಗಳಾದ ಮಲ್ಲಾರರಾವ್ ಕೆಂಬಾವಿ, ಸಿದ್ರಾಮಪ್ಪ ಯತನಾಳ, ಶಿವಲಿಂಗಪ್ಪ ಪಾಟೀಲರು ಸೇರಿ ಜೇರಟಗಿ, ಹಲ್ಲೂರ್, ಯಡ್ರಾಮಿ, ಕಲ್ಲೂರು ಮುಂತಾದ ಗ್ರಾಮಗಳ ಮೇಲೆ ರಜಾಕಾರರು ಎಸಗುತ್ತಿದ್ದ ದೌರ್ಜನ್ಯಕ್ಕೆ ತಡೆಯೊಡ್ಡಿದರು.

ಜೇವರ್ಗಿ ತಾಲೂಕಿನ ಮಳ್ಳಿ ಗ್ರಾಮದ ಮೇಲೆ ದಿನಾಂಕ ೦೯.೦೯.೧೯೪೮ರಲ್ಲಿ ಮಹಮ್ಮದ್ ಆಲಿ ಗುತ್ತೇದಾರ ಎಂಬುವನ ನೇತೃತ್ವದಲ್ಲಿ ರಜಾಕಾರರ ಪಡೆಯು ಮುತ್ತಿಗೆ ಹಾಕಿತು. ವಿಮೋಚನಾ ಹೋರಾಟಗಾರರಾದ ಕಿಶನ್‌ರಾವ್ ಅವರ ಕುಟುಂಬದ ನಾಲ್ಕು ಜನ ಸದಸ್ಯರನ್ನು ಕೊಂದುಹಾಕಿದರು. ಈ ಘಟನೆಯನ್ನು ವಿರೋಧಿಸಿ ಮಳ್ಳಿಗ್ರಾಮದ ಜನರು ರಜಾಕಾರರ ಮೇಲೆ ದಾಳಿ ಮಾಡಲು ಮುಂದಾದರು. ಆದರೆ ರಜಾಕಾರರ ಕೈಯಲ್ಲಿದ್ದ ಭರ್ಚಿ, ಬಂದೂಕುಗಳನ್ನು ನೋಡಿ ಹೆದರುತ್ತಾರೆ. ಕೆಲವರು ಪ್ರಾಣ ಭೀತಿಯಿಂದ ಓಡಿಹೋಗುತ್ತಾರೆ. ಇದರಿಂದಾಗಿ ಹತ್ಯೆಗೊಳಗಾದ ಕಿಶನ್‌ರಾವ್ ಕುಟುಂಬದ ಶವಗಳ ಅಂತ್ಯಸಂಸ್ಕಾರ ಮಾಡಲು ಜನರು ದೊರಕದಂತಾಗುತ್ತದೆ. ಆದರೆ ನಾಲ್ಕೈದು ದಿನಗಳ ತರುವಾಯ ಆ ಊರಿನ ಪರಿಶಿಷ್ಟ ಜಾತಿಯ ಯುವಕರು ಧೈರ್ಯದಿಂದ ಮುನ್ನುಗ್ಗಿ ಅಂತ್ಯಸಂಸ್ಕಾರ ನೆರವೇರಿಸುತ್ತಾರೆ. ಈ ಘೋರ ಘಟನೆಯಿಂದ ಬೇಸತ್ತ ಕಿಶನ್‌ರಾವ ಅವರು ರಜಾಕಾರರ ಭಯದಿಂದ ಕೆಲ ದಿನಗಳ ವರೆಗೆ ತಲೆಮರೆಸಿಕೊಳ್ಳುತ್ತಾರೆ. ಮತ್ತೊಮ್ಮೆ ಈತನನ್ನು ಹುಡುಕಿಕೊಂಡು ಬಂದ ರಜಾಕಾರರು ನಾಗೋಜಿ ಆಶಣ್ಣಾ, ಶೇಷಪ್ಪಾ, ಹಳ್ಳೆಪ್ಪಾ, ಬಸಲಿಂಗಪ್ಪಾ, ಯಲ್ಲಪ್ಪಾ ಧನಘುರ್, ಜಾನೂಜಿ, ಸಿದ್ರಾಮಪ್ಪಾ ಲಿಂಗಪ್ಪಾ, ಒಟ್ಟು ಏಳು ಜನರನ್ನು ಬಲಿ ತೆಗೆದುಕೊಂಡರು.[೧೩] ಈ ಘಟನೆಯಿಂದ ಮಳ್ಳಿಗ್ರಾಮವು ತತ್ತರಿಸಿಹೋಯಿತು. ಅನೇಕರು ಮನೆ ಆಸ್ತಿಗಳನ್ನು ಬಿಟ್ಟು ದೂರದ ಪ್ರಯಾಣ ಬೆಳೆಸಿದರು. ಆಗ ಸಿಂದಗಿ ಶಿಬಿರದ ಶಿಬಿರಾಧಿಪತಿಯಾದ ಶರಣಗೌಡರು ಮಳ್ಳಿ ಗ್ರಾಮಕ್ಕೆ ಧಾವಿಸಿ ರಜಾಕಾರರ ಕ್ರೂರ ನೀತಿಯನ್ನು ಖಂಡಿಸಿದರು. ಸಿಂದಗಿ,

ಧುದನಿ, ಹಾಗೂ ತಾಳಿಕೋಟೆ ಶಿಬಿರದಿಂದ ಕೆಲ ಕಾರ್ಯಕರ್ತರನ್ನು ಕರೆಸಿ ರಜಾಕಾರರ ತಾಣಗಳನ್ನು ಪತ್ತೆ ಹಚ್ಚಿ ಅವರನ್ನು ಕೊಂದರು.

ನಿಜಾಮನ ಗಡಿ ಪ್ರದೇಶಗಳಲ್ಲಿ ಪಠಾಣರು ಹಾಗೂ ರಜಾಕಾರರು ಅನೇಕ ಜನರ ಮೇಲೆ ಕೊಲೆ, ಲೂಟಿ, ಸ್ತ್ರೀಯರ ಮಾನಾಪಹರಣ ಮುಂತಾದ ಕ್ರೂರಕೃರ್ತಗಳನ್ನು ಎಸಗುತ್ತಿದ್ದರು. ಎಲ್ಲಿ ನೋಡಿದರಲ್ಲಿ ಹೆಣಗಳರಾಶಿ ಭಯ ಭೀತಿಯಿಂದ ಜನರು ಜೀವನ ಸಾಗಿಸುತ್ತಿದ್ದರು. ಹೀಗೆ ರಜಾಕಾರರ ಹಾವಳಿಗೆ ಬಲಿಯಾದ ಕುಳಗೇರಿ ಗ್ರಾಮವು ರಜಾಕಾರರ ರಾಕ್ಷಿಸಿ ಕೃತ್ಯಗಳಿಗೆ ಬೇಸತ್ತು ಹೋಗಿತ್ತು. ಶರಣಗೌಡ ಪಾಟೀಲ ಹಾಗೂ ಚನ್ನಬಸಪ್ಪ ಕುಳಗೇರಿ ಮುಂತಾದ ಯುವಕರು ರಜಾಕಾರರ ಮೇಲೆ ದಾಳಿ ಮಾಡಿ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು. ಕಕ್ಕಳಮೇಲಿಯ ತಸೀಲ್ ಕಛೇರಿ, ಸುಂಕದ ನಾಕಾ ಇವುಗಳ ಮೇಲೆ ದಾಳಿಮಾಡಿ ನಿಜಾಂ ಸರಕಾರದ ನಿದ್ದೆ ಗೆಡೆಸಿದರು. ಸಿಂದಿಗಿ ಶಿಬಿರದಲ್ಲಿ ಗುಪ್ತವಾಗಿ ಕರಪತ್ರಗಳನ್ನು ಹಂಚಿ ಯುವಕರನ್ನು ಶಿಬಿರಕ್ಕೆ ಸೇರುವಂತೆ ಪ್ರೋತ್ಸಾಹಿಸುತ್ತಿದ್ದರು. ರಜಾಕಾರರು ಶರಣಗೌಡಪಾಟೀಲ ಹಾಗೂ ಚನ್ನಬಸಪ್ಪನವರನ್ನು ಕೊಲ್ಲಲ್ಲು ಸಂಚು ಹೂಡಿದ ಸುದ್ದಿಯನ್ನು ಶಿಬಿರದ ಗುಪ್ತಚಾರರಿಂದ ತಿಳಿದುಬಂತು. ಆಗ ಇವರು ಮಾರುವೇಷ ಹಾಕಿಕೊಂಡು ರಜಾಕಾರರ ಕ್ಯಾಂಪನ್ನು ಧ್ವಂಸಮಾಡಿದರು. ಹಾಗೇ ರಜಾಕಾರರ ಹಾವಳಿಗೆ ಸುರುಪುರದ ರಾಜನ್ ಕೊಳ್ಳೂರಿನ ವಿರೂಪಾಕ್ಷಪ್ಪ ಹಾಗೂ ಸಿಂದಿಗಿ ಶಿಬಿರದ ಕಾರ್ಯಕರ್ತರಾದ ಮುರಳೀಧರ ಪಟವಾರಿ, ಭೀಮರಾವ್ ಯಾತನೂರ ಮಹಾಂತಗೌಡ ಮುಂತಾದ ಧೀರ ನಾಯಕರು ಬಲಿಯಾದರು.

“ಸಿಂದಿಗಿ ಶಿಬಿರದ ಸೈನಿಕ ಕಾರ್ಯಕರ್ತರು ಏಪ್ರಿಲ್ ೧೯೪೮ರಿಂದ ಸೆಪ್ಟೆಂಬರ್ ೧೯೪೮ರ ವರೆಗೆ ನಿಜಾಂ ಸಂಸ್ಥಾನದ ನಿಂಬರಗ, ರೇವೂರ, ಅಫಜಲಪೂರ, ನೆಲೋಗಿ, ಯಡ್ರಾಮಿ, ಕೆಂಬಾವಿ ಮತ್ತು ಹುಣಸಗಿಗಳಲ್ಲಿ ಪೊಲೀಸ್ ಠಾಣೆ ಹಾಗೂ ಕಂದಾಯ ಕಛೇರಿಗಳನ್ನು ಲೂಟಿ ಮಾಡಿ ಅಲ್ಲಿದ್ದ ನಿಜಾಂನ ಕಾಗದ ಪತ್ರಗಳಿಗೆ ಬೆಂಕಿ ಇಟ್ಟರು.”[೧೪]

ಹೀಗೆ ಸಾಹಸ ಮಯಾ ಬದುಕುನ್ನು ಸಾಗಿಸದ ಶರಣಗೌಡ ಪಾಟೀಲರು ಸಿಂದಿಗಿ ಶಿಬಿರದ ಶಿಬಿರಾರ್ಥಿಗಳೊಂದಿಗೆ ರಜಾಕಾರರ ದಬ್ಬಾಳಿಕೆಯನ್ನು ಅಂತ್ಯಗೊಳಿಸಲು ಪ್ರಯತ್ನಿಸಿದರು.

### ೩.೭. ಕೇಸರ ಜವಳಗಾ ಶಿಬಿರ

ಕಲಬುರ್ಗಿ ಹಾಗೂ ಸೊಲ್ಲಾಪುರ ಜಿಲ್ಲೆಯ ಗಡಿಭಾಗದಲ್ಲಿ ರಜಾಕಾರರ ಹಾವಳಿ ಹೆಚ್ಚಾಗತೊಡಗಿತ್ತು. ರಜಾಕಾರರನ್ನು ಸದೆಬಡೆಯಲು ವಿಮೋಚನಾ ಹೋರಾಟಗಾರರಾದ ಜಗನ್ನಾಥರಾವ ಚಂಡ್ರಿಕಿ ಶರಣಗೌಡ ಪಾಟೀಲ, ಗುರುಭೀಮರಾವ್ ಪಾಟೀಲರು ಹಾಗೂ ಗೋವಿಂದದಾಸ್ ಸರಾಫ್ ಅವರ

ಸೂಚನೆ ಮೇರಿಗೆ ಕೇಸರ ಜವಳಗಾ ಶಿಬಿರವನ್ನು ಸ್ಥಾಪಿಸಲಾಯಿತು. ಈ ಶಿಬಿರದ ಮುಖಂಡತ್ವವನ್ನು ಡಿ.ಬಿ.ಕಲ್ಮಣಕರ್ ಅವರು ವಹಿಸಿಕೊಂಡರು. ಈ ಶಿಬಿರವು ಧುದನಿ, ಗೌಡಗಾಂವ, ವಾಗ್ದರಿಗಿ ಶಿಬಿರದ ನಿಕಟ ಸಂಪರ್ಕವನ್ನು ಹೊಂದಿತು. ಈ ಮೂರು ಶಿಬಿರದ ಕಾರ್ಯಕರ್ತರು ಕೇಸರ ಜವಳಗಾ ಶಿಬಿರದಲ್ಲೂ ಕಾರ್ಯನಿರ್ವಹಿಸುತ್ತಿದ್ದು, ಬೇರೆ ಶಿಬಿರವೆಂದು ಭೇದತೋರದೆ ಕೇವಲ ರಜಾಕಾರರನ್ನು ಸೆದೆಬಡೆಯುವ ಗುರಿ ಹೊಂದಿದ್ದರು. ಕೇಸರ ಜವಳಗಾ ಶಿಬಿರದ ಶಿಬಿರಾಧಿಪತಿ ಹಾಗೂ ನೂರದಪ್ಪ ರುದ್ರವಾಡಿ, ಹನುಮಂತರಾಯ ರುದ್ರವಾಡಿ, ದೂಳಪ್ಪ ಅನೂರ, ಅಪ್ಪಾರಾವ ಜವಳಗಿ, ಸಿದ್ಧರಾಮಪ್ಪ ಜವಳಗಿ ಅನೇಕ ಶಿಬಿರಾರ್ಥಿಗಳು ಕೂಡಿ ೧೦.೭.೧೯೪೮ರಂದು ಸರಸಂಭಾ ಗ್ರಾಮದ ರಜಾಕಾರರ ಮೇಲೆ ದಾಳಿ ಮಾಡಿದರು. ಈ ದಾಳಿಯಲ್ಲಿ ಹೋರಾಟಗಾರರಿಗೆ ರಜಾಕಾರರನ್ನು ಎದುರಿಸಲು ಕಷ್ಟವಾಯಿತು. ಕೆಲ ಕಾರ್ಯಕರ್ತರು ತಮ್ಮ ತೊಂದರೆಗಳನ್ನು ಶಿಬಿರದ ಮುಖಂಡರಾದ ಕಲ್ಮಣಕರ್‌ರಲ್ಲಿ ಹೇಳಿಕೊಂಡರು. ಆಗ ಪರಿಸ್ಥಿತಿಯನ್ನು ಅರಿತುಕೊಂಡ ಇವರು ಕಾರ್ಯಕರ್ತರನ್ನು ಪಾಟಿಯಾಲ, ಪುಣೆ, ಡೆಹರಾಡೂನ್, ಸತಾರ ಮುಂತಾದ ಪ್ರದೇಶಗಳಿಗೆ ಶಸ್ತ್ರಾಸ್ತ್ರ ತರಬೇತಿ ಪಡೆಯಲು ಕಳಿಸಿಕೊಟ್ಟರು. ಕೆಲದಿನಗಳಕಾಲ ಶಸ್ತ್ರಾಸ್ತ್ರ ತರಬೇತಿ ಪಡೆದ ಯುವಕರು ಕೇಸರ ಜವಳಗಾ ಶಿಬಿರಕ್ಕೆ ಮರಳಿ ರಜಾಕಾರರ ತಾಣಗಳನ್ನು ಧ್ವಂಸಮಾಡತೊಡಗಿದರು.

ಅನೂರ ಗ್ರಾಮದ ಮೇಲೆ ದಿನನಿತ್ಯ ಪಠಾಣರು ಅಧಿಕಾರವನ್ನು ನಡೆಸುತ್ತಿದರು. ಊರಿನಹೊರ ಭಾಗದಲ್ಲಿ ಪಠಾಣರು ದೊಡ್ಡಕ್ಯಾಂಪನ್ನು ಹಾಕಿಕೊಂಡು ಅನೂರ ಗ್ರಾಮದ ಜನರಲ್ಲಿ ಹಫ್ತಾ ವಸೂಲಿ ಮಾಡುತ್ತಿದ್ದರು. ರೈತರು ಬೆಳೆದ ದವಸ ಧಾನ್ಯಗಳಲ್ಲಿ ಅರ್ಧದಷ್ಟು ಪಾಲು ಪಠಾಣರಿಗೆ ಕೊಡಬೇಕಾಗಿತ್ತು. ಇದರಿಂದ ಬೇಸತ್ತ ತಿಪ್ಪಣ್ಣ ಅನೂರ ಹಾಗೂ ಧೂಳಪ್ಪ ಅನೂರರವರು ಕೇಸರ ಜವಳಗಾ ಶಿಬಿರದ ಶಿಬಿರಾಧಿಪತಿಯಲ್ಲಿ ಮೊರೆಹೋದರು.

ಶಸ್ತ್ರಾಸ್ತ್ರ ತರಬೇತಿ ಹೊಂದಿದ ತಂಡವನ್ನು ಕಲ್ಮಣಕರ್‌ರವರು ಅನೂರ ಗ್ರಾಮದ ಪಠಾಣರ ಮೇಲೆ ದಾಳಿ ಮಾಡಲು ಹೇಳಿದರು. ಅವರ ಮೇಲೆ ದಾಳಿಮಾಡಿದ ಶಿಬಿರಾರ್ಥಿಗಳು ಪಠಾಣರನ್ನು ಭೀಕರವಾಗಿ ಕೊಲೆಗೈದರು. ಈ ಶಿಬಿರದ ಮತ್ತೊಂದು ಸಾಹಸವೆಂದರೆ, ಪಡಸಾವಳಗಿ ಗ್ರಾಮವನ್ನು ರಜಾಕಾರರಿಂದ ಮುಕ್ತಿಗೊಳಿಸಲು ಘೋರ ಹೋರಾಟವೇ ನಡೆಯಿತು. ಈ ಹೋರಾಟದಲ್ಲಿ ಮೂರು ಜನ ರಜಾಕಾರರನ್ನು ಕೊಲೆಮಾಡಿ ಅವರಲ್ಲಿದ್ದ ಹೊಸ ರಿವಾಲ್ವರುಗಳನ್ನು ವಶಪಡಿಸಿಕೊಂಡರು. "ಹೀಗೆ ವಶಪಡಿಸಿಕೊಂಡ ರಿವಾಲ್ವರ್‌ಗಳಿಂದ ತಿಳಿದು ಬಂದ ಅಂಶವೆಂದರೆ ಆಸ್ಟ್ರೇಲಿಯಾದ ಶಸ್ತ್ರಾಸ್ತ್ರ ಸರಬರಾಜುಗಾರ ಸಿಡ್ನಿಕಾಟನ್ ರಹಸ್ಯವಾಗಿ ನಿಜಾಂ ಸರಕಾರಕ್ಕೆ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತಿದ್ದಾನೆ ಎಂಬುದು ದೃಢಪಟ್ಟಿತು. ಅವನು ಕರಾಚಿಯನ್ನು ಪ್ರಧಾನ ಕಛೇರಿ ಮಾಡಿಕೊಂಡು ಶಸ್ತ್ರಾಸ್ತ್ರಗಳನ್ನು

ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದನು. ರಾತ್ರಿಯ ಹೊತ್ತು ಬೀದರ್ ಹಾಗೂ ವಾರಂಗಲ್‌ಗಳಲ್ಲಿನ ವಿಮಾನ ನಿಲ್ದಾಣಗಳಲ್ಲಿ ಇದ್ದ ಉಗ್ರಾಣಗಳಿಗೆ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತಿದ್ದ ಎನ್ನಲಾಗಿದೆ.[೧೫] ಇದರಿಂದ ನಿಜಾಂ ಸರಕಾರ ಆಡಳಿತದಲ್ಲಿ ಅನೇಕ ಶಸ್ತ್ರಾಸ್ತ್ರ ಹಾಗೂ ಮದ್ದುಗುಂಡುಗಳ ಕಳ್ಳಸಾಗಾಣಿಕೆ ನಡೆಯುತ್ತಿತ್ತೆಂದು ಗೊತ್ತಾಗುತ್ತದೆ. ರಜಾಕಾರರಿಗೆ ಹಾಗೂ ಪಠಾಣರಿಗೆ ಅನೇಕ ರೀತಿಯ ಆಯುಧಗಳನ್ನು ನಿಜಾಂ ಬೇರೆ ರಾಷ್ಟ್ರಗಳಿಂದ ತರಿಸಿಕೊಡುತ್ತಿದ್ದನೆಂದು ಹೇಳಬಹುದು.

ಡಿ.ಬಿ.ಕಲ್ಮಣಕರ್‌ರವರು ಹೈದರಾಬಾದ್ ಸಂಸ್ಥಾನದ ಪರಿಸ್ಥಿತಿ, ಮತ್ತು ನಿಂಜಾನ ವಿರುದ್ಧ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್‌ನ ಹೋರಾಟ ಹಾಗೂ ಅಸಹಕಾರ ಚಳುವಳಿ ಮುಂತಾದ ವಿಚಾರಗಳ ಬಗ್ಗೆ ಈ ಭಾಗದ ಜನತೆಗೆ ತಿಳಿಸಿದರು. ಕೇಸರ ಜವಳಗಾ ಶಿಬಿರಕ್ಕೆ ಕಲಬುರ್ಗಿಯ ನಾರಾಯಣರಾವ್ ಕಾನಿಹಾಳ್, ಭೂಸನೂರಿನ ಭೈರಪ್ಪ ಪಾಟೀಲ್, ತಡಕಲ್‌ನ ದೇಶಮುಖರು, ಶಾಂತಪ್ಪ ಮುನೋಳಿ, ಚಿಕ್ಕವೀರಯ್ಯಸ್ವಾಮಿ, ರುಕ್ಮಯ್ಯ ಗುತ್ತೇದಾರ್, ಅಣೂರಿನ ಸಾಯಬಣ್ಣಪ್ಪ ಕಾರಬಾರಿ, ಸಿದ್ಧಲಿಂಗಪ್ಪ ಪಾಟೀಲ್, ರುದ್ರವಾಡಿಯ ರಿಯಾಸತ್‌ಖಾನ್ ಮೊದಲಾದವರು ಜಾತಿಭೇದ ಮರೆತು ರಜಾಕಾರರೊಡನೆ ಹೋರಾಡಲು ಸಹಕರಿಸಿದರು. ಶಿಬಿರದ ಶಿಬಿರಾಧಿಪತಿಯಾಗಿದ್ದ ಕಲ್ಮಣಕರ್‌ರವರು ಹಳ್ಳಿಗಳಿಗೆ ಹೋಗಿ ಗ್ರಾಮದ ಜನರನ್ನು ಒಂದುಗೂಡಿಸಿ ಅವರನ್ನು ನಿಜಾಂನ ವಿರುದ್ಧ ಹೋರಾಡಲು ಹುರಿದುಂಬಿಸುತ್ತಿದ್ದರು. ಅನೇಕ ಯುವಕರನ್ನು ಸಂಘಟಿಸಿ ಈಚಲ ಮರಗಳನ್ನು ಕಡಿದು ನಿಜಾಂನಿಗೆ ಧಿಕ್ಕಾರ ಕೂಗುತ್ತಿದ್ದರು. ಈ ರೀತಿ ಸುಮಾರು ಐವತ್ತು ಆರವತ್ತು ಗ್ರಾಮಗಳಲ್ಲಿ ತಿರುಗಾಡಿ ಜನರಲ್ಲಿ ರಾಷ್ಟ್ರೀಯತೆಯ ಜಾಗೃತಿಯನ್ನು ಮೂಡಿಸುತ್ತಿದರು. ೧೯೪೮ ಫೆಬ್ರವರಿಯಲ್ಲಿ ಕಲ್ಮಣಕರ್‌ರು, ನಾರಾಯಣರಾವ್ ಕಾನಿಹಾಳ, ಧುದನಿ ಶಿಬಿರದ ಮುಖಂಡ ಗುರುಭೀಮರಾವ ಪಾಟೀಲ್ ಹಾಗೂ ಗೌಡಗಾಂವ ಶಿಬಿರದ ಮುಖಂಡ ಭೈರಪ್ಪ ಪಾಟೀಲರ ನೇತೃತ್ವದಲ್ಲಿ ನಿಂಬರ್ಗಾ ಪೊಲೀಸ್ ಠಾಣೆಗೆ ಮುತ್ತಿಗೆ ಹಾಕಿ ಅದನ್ನು ನಾಶಪಡಿಸಿದರು. ಈ ದಾಳಿಯಲ್ಲಿ ನಿಜಾಂ ಪೊಲೀಸ್‌ನೊಬ್ಬನು ಮೃತಪಟ್ಟನು. ಅಲ್ಲಿಂದ ಅನೇಕ ಆಯುಧಗಳನ್ನು ಲೂಟಿಮಾಡಿ ಕೇಸರ ಜವಳಗಾ ಶಿಬಿರಕ್ಕೆ ರವಾನಿಸಿದರು. ಕೇಸರ ಜವಳಗಾ ಗ್ರಾಮದ ಸಮೀಪವಿದ್ದ ಮಾವಿನ ತೋಪಿನ ಬಳಿ ರಜಾಕಾರರಿಗೂ ಹಾಗೂ ಕೇಸರ ಜವಳಗಾ ಶಿಬಿರದ ಶಿಬಿರಾರ್ಥಿಗಳಿಗೂ ಘರ್ಷಣೆ ನಡೆಯಿತು. ಈ ಘರ್ಷಣೆಯಲ್ಲಿ ಮೂರು ಜನ ರಜಾಕಾರರು ಮೃತಪಟ್ಟರು. ಅಲ್ಲಿಂದ ಕೇಸರ ಜವಳಗಾ ಗ್ರಾಮವನ್ನು ಪ್ರವೇಶಿಸಿ ರಜಾಕಾರರನ್ನು ಹಾಗೂ ಪಠಾಣರನ್ನು ಹೆದರಿಸಿ ಓಡಿಸಿದರು. ಇದಿರಂದ ರಜಾಕಾರರ ಸಿಟ್ಟು ಹೆಚ್ಚುತ್ತಾಹೋಯಿತು. ''ಕೆಲದಿನಗಳ ನಂತರ ರಜಾಕಾರರು ಮತ್ತೆ ಕೇಸರ ಜವಳಗಾ ಊರಿನ ಮೇಲೆ ದಾಳಿ ಮಾಡಿ ಗುಂಡಿನ ಮಳೆಗೆರೆಯತೊಡಗಿದರು. ಕಲ್ಮಣಕರ್‌ರವರು

ಈ ಸಮಯದಲ್ಲಿ ಬೇರೆ ಗ್ರಾಮಕ್ಕೆ ಹೋಗಿದ್ದರು. ಗೌಡಗಾಂವ ಶಿಬಿರದ ಶಿಬಿರಾರ್ಥಿಯಿಂದ ಸುದ್ದಿ ತಿಳಿದು ಕಲ್ಮಣಕರ್‌ರವರು ಕುದುರೆ ಹತ್ತಿ ಕೇಸರಜವಳಗಾ ಗ್ರಾಮ ಸೇರಿದರು. ಅಷ್ಟರಲ್ಲಿ ರಜಾಕಾರರು ಕೇಸರ ಜವಳಗಾದಿಂದ ಪಕ್ಕದ ಅಲೂರು ಗ್ರಾಮಕ್ಕೆ ತೆರಳಿದ್ದರು. ಡಿ.ಬಿ.ಕಲ್ಮಣಕರ್‌ವರು ತಮ್ಮ ಸಂಡಿಗರೊಂದಿಗೆ ರಜಾಕಾರರನ್ನು ಬೆಂಬತ್ತಿದರು. ಆಗ ರಜಾಕಾರರಿಗೂ ಮತ್ತು ಕೇಸರಜವಳಗಾ ಶಿಬಿರಾರ್ಥಿಗಳಿಗು ಅಲ್ಲೂರು ಕೊಳ್ಳದಲ್ಲಿ ಭಯಂಕರ ಗುಂಡಿನ ಚಕಮುಕಿ ನಡೆಯಿತು. ಇಲ್ಲೂ ಕೂಡ ಇಬ್ಬರು ರಜಾಕಾರರು ಸತ್ತರು. ಕಲ್ಮಣಕರ್‌ವರ ಸಮೀಪ ಸತ್ತುಬಿದ್ದ ರಜಾಕಾರನ ಬಳಿ ಹೊಚ್ಚ ಹೊಸ ಸ್ಟೆನ್‌ಗನ್ ಇದ್ದಿತು. ಅದನ್ನು ಕಲ್ಮಣಕರ್ ಅವರು ಜಾಗರೂಕತೆಯಿಂದ ಹಾಗೂ ರಜಾಕಾರರ ಗುಂಡಿನ ದಾಳಿಯ ಮಧ್ಯೆಯೂ ಎತ್ತಿಕೊಂಡು ಬಂದು ಪೊಲೀಸ್ ಅಧಿಕಾರಿಗಳ ಕೈಗೆ ನೀಡುತ್ತಾರೆ. ಅದನ್ನು ಅವರು ಸೊಲ್ಲಾಪುರ ಸೂಪರಿಂಟೆಂಡಂಟ್ ಮೂಲಕ ದೆಹಲಿಗೆ ಕಳುಹಿಸಿದರು. ಆಗ ಅದು ಪಾಕಿಸ್ತಾನದ ಗುರುತನ್ನು ಹೊಂದಿತ್ತೆಂದು ಸಮಾಚಾರ ತಿಳಿದರು. ಈ ರೀತಿಯ ಅನೇಕ ಸಾಕ್ಷ್ಯಾಧಾರಗಳ ಮೇಲೆ ಭಾರತ ಸರಕಾರ ಪೊಲೀಸ್ ಕಾರ್ಯಚರಣೆಯನ್ನು ಬೇಗೆ ನಡೆಸಲು ತಿರ್ಮಾನಿಸಿತು”.[೧೬]

ಈ ಘಟನೆಯ ತರುವಾಯ ರಜಾಕಾರರು ಅಣೂರಿಗೆ ಗ್ರಾಮಕ್ಕೆ ಮುತ್ತಿಗೆ ಹಾಕಿ, ಐದು ಜನ ಸ್ವಯಂ ಸೇವಕರನ್ನು ಎಳೆದೊಯ್ದರು. ಅವರ ಪೈಕಿ ಸಿದ್ಧರಾಮಪ್ಪ ಆನಂದಪ್ಪ ಧಮ್ಮೂರ, ಆನಂದರಾವ್ ಯಶವಂತರಾವ್ ಮುಗಳೆ, ಆನಂದರಾವ್ ವಾಂಜರೆ ಅವರನ್ನು ಲಾಡ್ ಚಿಂಚೋಳಿ ಬಳಿ ಹತ್ಯೆ ಮಾಡಿದರು. ರಜಾಕಾರರ ಹಿಡಿತದಿಂದ ಮಾಣಿಕ್ ಬಸವಂತರಾವ್ ವಂಟಿ ಅವರು ತಪ್ಪಿಸಿಕೊಂಡು ಬಂದರು. ಕೇಸರ ಜವಳಗಾ ಶಿಬಿರಕ್ಕೆ ಪತ್ರಿಕೆಗಳನ್ನು ತರುತ್ತಿದ್ದ ಭೀಮರಾವ್ ಕೋಳೆ ಅವರು ಪತ್ರಿಕೆ ತರುವಾಗ ಖಸಗಿ ಗ್ರಾಮದ ಬಳಿ ರಜಾಕಾರರ ಕೈಗೆ ಸಿಕ್ಕಿ ಬಿದ್ದರು. ಇವರನ್ನು ರಜಾಕಾರರು ಹೊಡೆದು ಸಾಯಿಸಿದರು. ಅದೇ ರೀತಿ ಶಂಕರಜ್ಞಾನ ಮುಗಳೆ ಎಂಬ ಕಾರ್ಯಕರ್ತನು ಮಾರುವೇಷದಲ್ಲಿ ಅಡ್ಡಾಡುತ್ತಿದ್ದಾಗ ಅಳಂಗಾ ಬಳಿ ರಜಾಕಾರರ ಕೈಗೆ ಸಿಕ್ಕಿ ಬಿದ್ದನು. ಇವರನ್ನು ರಜಾಕಾರರಿಂದ ಬಿಡುಗಡೆ ಮಾಡಬೇಕೆಂದು ಸಂಬಾಪವಾರ ಎಂಬುವವರು ಪಠಾಣರ ವೇಷ ಧರಿಸಿ ರಜಾಕಾರರ ಕ್ಯಾಂಪನ್ನು ಪ್ರವೇಶಿಸಿದರು. ಆದರೆ ರಜಾಕಾರರು ಇವರನ್ನು ಗುರುತಿಸಿ ಆಳಂದ ಗ್ರಾಮಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸಂಬಾಪವಾರ್ ಹಾಗೂ ಶಂಕರಜ್ಞಾನ ಮುಗಳೆ ಇವರಿಬ್ಬರನ್ನು ಸಾಯಿಸಿದರು. ಹೀಗೆ ಕೇಸರ ಜವಳಗಾ ಶಿಬಿರದ ಹೋರಾಟಗಾರರ ಧೈರ್ಯ, ಸಾಹಸ, ಸಾಮರ್ಥ್ಯಗಳು ಚರಿತ್ರೆಯಲ್ಲಿ ದಾಖಲಾರ್ಹವಾಗಿವೆ.

ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಪುರುಷರಲ್ಲದೇ ಮಹಿಳೆಯರು ಸಹ ನಿಜಾಂ ಸರಕಾರದ ವಿರುದ್ಧ ಹೋರಾಟ ಮಾಡಿದ ಸಂಗತಿಗಳನ್ನು ಕಾಣುತ್ತೇವೆ. ಅಂತಹ ವೀರ

ಮಹಿಳೆಯರಾದ ಹೈದರಾಬಾದಿನ ಯಶೋದಾಬಾಯಿ, ಬ್ರಿಜ್‌ರಾಣಿ, ವಿಮಲಾ ಮೇಲುಕೋಟೆ, ಉಷಾ ಪಂಗ್ರಿಕರ್, ಅಹಲ್ಯಾಬಾಯಿ, ಮುಂತಾದ ಮಹಿಳೆಯರು ನಿಜಾಂ ಪ್ರತಿಬಂಧಕಾಜ್ಞೆ ಉಲ್ಲಂಘಿಸಿ ಅನೇಕ ಹೋರಾಟಗಳನ್ನು ಮಾಡಿದ್ದಾರೆ. ಇದರಂತೆ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳಲ್ಲಿ ಹೋರಾಡಿದ ವೀರ ಹೋರಾಟಗಾರ್ತಿಯಾದ ತುಂಗಬಳೂರ್ಗಿ ಒಬ್ಬರು. ಇವರು ೧೯೪೭ರಲ್ಲಿ ಸ್ಟೇಟ್ ಕಾಂಗ್ರೆಸ್‌ಗೆ ನಿಷೇಧ ಹೇರಿದ ನಿಜಾಂನ ವಿರುದ್ಧ ನಡೆದ ಹೋರಾಟದಲ್ಲಿ ಧುಮುಕಿದರು. ಅದರಂತೆ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳಾದ ಧುಧನಿ ಗೌಡಗಾಂವ ಸಿಂದಗಿ, ವಾಗ್ದರಿಗಿ, ಕೇಸರ ಜವಳಗಾ ಶಿಬಿರಗಳಲ್ಲಿ ರಜಾಕಾರರ ವಿರುದ್ಧ ಬೂದಿ ಮುಚ್ಚಿದ ಕೆಂಡದಂತೆ ಹೋರಾಡಿದರು. ಹಾಗೂ ಈ ಭಾಗದ ಮಹಿಳೆಯರಿಗೂ ಪ್ರೇರಕರಾದರು. ಇವರ ಪ್ರೇರಣೆಯಿಂದ ಕೇಸರ ಜವಳಗಾ ಶಿಬಿರದಲ್ಲಿ ಕೆಲ ಮಹಿಳೆಯರು ಶಿಬಿರಾರ್ಥಿಗಳಿಗೆ ಅಡುಗೆ ಮಾಡಲು ಸಿದ್ಧರಾದರು. ಕೆಲ ಧೀರ ಮಹಿಳೆಯರು ರಜಾಕಾರರನ್ನು ಸದೆಬಡೆಯಲು ಸಹಾಯ ಮಾಡುತ್ತಿದ್ದರು. ತುಂಗಾ ಬಳೂರ್ಗಿಯವರು ಸೊಲ್ಲಾಪುರದ ಸಮಾಜವಾದಿ ನಾಯಕರಾದ ನಾನಾಸಾಹೇಬ ಗೋರೆ, ಶಿರುಬಾವುಲಿಮೆ, ಮಹಾದೇವಸಿಂಗ್ ಅವರನ್ನು ಭೇಟಿಯಾಗಿ, ಕಲಬುರ್ಗಿ ಜಿಲ್ಲೆಯ ಮಹಿಳೆಯರ ಪರಿಸ್ಥಿತಿಯನ್ನು ವಿವರಿಸಿದರು. ಆಗ ಅವರು ತುಂಗಾಬಳೂರ್ಗಿಯವರಿಗೆ ನಿಜಾಂ ಸರಕಾರದೊಡನೆ ನೇರ ಹೋರಾಟ ನಡೆಸುವುದು ಬೇಡ ಎಂದು ಹೇಳಿದರು. ಕೆಲ ಧೀರ ಮಹಿಳೆಯರಿಗೆ ಗುಪ್ತವಾಗಿ ಗಡಿಶಿಬಿರಗಳಿಗೆ ಶಸ್ತ್ರಾಸ್ತ್ರಗಳನ್ನು ಸಾಗಿಸುವ ಜವಾಬ್ದಾರಿಯನ್ನು ಹೊರೆಸಿದರು. ಕಲ್ಕತ್ತಾ, ಪುಣೆ, ಮುಂಬಯಿಗಳಿಂದ ಪಿಸ್ತೂಲ್, ಬಂದೂಕು ಹಾಗೂ ಬಾಂಬ್‌ಗಳನ್ನು ಸೊಲ್ಲಾಪುರ ಮಾರ್ಗದಿಂದ ಗಡಿಶಿಬಿರಗಳಿಗೆ ತಲುಪಿಸಬೇಕು ಎಂದು ಹೇಳಿದರು. ಅದರಂತೆ ಕಲ್ಕತ್ತಾ, ಪುಣೆ, ಮುಂಬಯಿಗಳಿಗೆ ಹೋಗಿ, ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಬರುತ್ತಿದ್ದರು. ಕೂಲಿಯ ಸಹಾಯವಿಲ್ಲದೇ ನಾಜೂಕಾಗಿ ನಿಗದಿತ ಬೋಗಿಯಲ್ಲಿ ಪೆಟ್ಟಿಗೆಯೊಂದಿಗೆ ಕುಳಿತು ಸೊಲಾಪುರ ತಲುಪುತ್ತಿದ್ದರು.[೯೭] ಅಲ್ಲಿ ಇಳಿದು ಹೊರ ಬರುತ್ತಲೇ ಶಿಬಿರದವರು ಪೆಟ್ಟಿಗೆಯನ್ನು ನಿಗದಿತ ಸ್ಥಳಕ್ಕೆ ತಲುಪಿಸುತ್ತಿದ್ದರು. ಹೀಗೆ ಅನೇಕರ ಸಹಾಯದಿಂದ ಗಡಿ ಶಿಬಿರಗಳ ಉದ್ದೇಶವನ್ನು ನೇರವರಿಸುತ್ತಾ ನಡೆದ ಶಿಬಿರಾರ್ಥಿಗಳು, ರಜಾಕಾರರ ಕಾರ್ಯಗಳನ್ನು ಭಗ್ನಗೊಳಿಸಿದರು. ಕೆಲಶಿಬಿರಾರ್ಥಿಗಳು ಹಳ್ಳಿಹಳ್ಳಿಗೆ ಹೋಗಿ ಜನರಿಂದ ಆಹಾರ ಪದಾರ್ಥ ಸಂಗ್ರಹಣೆ ಮಾಡುತ್ತಿದ್ದರು. ಕೇಸರಾಜವಳಗಾ ಶಿಬಿರದ ಖಜಾಂಚಿಯಾದ ಸಾಯಿಬಣ್ಣಾಪ್ಪ ಹಾಗೂ ಕಾರ್ಯದರ್ಶಿಯಾದ ಕುಸುಮಾಕರ ದೇಸಾಯಿಯವರು ಸಾವಂತವಾಡಿ ಮತ್ತು ಭಾರತ ಒಕ್ಕೂಟ ಇತರ ಪ್ರದೇಶಗಳಿಂದ ಆಯುಧಗಳನ್ನು ತರಿಸಿಕೊಳ್ಳುತ್ತಿದ್ದರು. ಹೀಗೆ ಆಯುಧಗಳನ್ನು ತರುವ ಸಂದರ್ಭದಲ್ಲಿ ಖಸಗಿ ಗ್ರಾಮದ ಶಿಬಿರದ ಕಾರ್ಯಕರ್ತರಾದ ಹೊದಲೂರಿನ ಆನಂದರಾಯನು ರಜಾಕಾರರ ಗುಂಡೇಟಿನಿಂದ ಮೃತಪಟ್ಟನು. ಅನೇಕ

ರೀತಿಯ ಕಷ್ಟಗಳನ್ನು ಅನುಭವಿಸಿದ ಕೇಸರ ಜವಳಗಾ ಶಿಬಿರಾರ್ಥಿಗಳು ಸತತವಾಗಿ ರಜಾಕಾರರೊಡನೆ ಹೋರಾಡಿದರು. ೧೩ನೇ ಸೆಪ್ಟೆಂಬರ್ ೧೯೪೮ರ ಮಧ್ಯರಾತ್ರಿ ನಂತರ ಪೊಲೀಸ್ ಆಕ್ಷನ್ ಶುರುವಾಯಿತು. ಸೊಲ್ಲಾಪುರದ ಕಡೆಯಿಂದ ಮೇಜರ್ ಜನರಲ್ ಚೌಧುರಿ ಸೈನಿಕ ಕಾರ್ಯಾಚರಣೆ ಪ್ರಾರಂಭಿಸಿದರು. ಭಾರತದ ಸೈನಿಕರಿಗೆ ರಜಾಕಾರರ ಕ್ಯಾಂಪಗಳನ್ನು ತೋರಿಸುತ್ತ ಶಿಬಿರಾರ್ಥಿಗಳು ಮುಂದೆ ನಡೆದರು. ಅನೇಕ ರಜಾಕಾರರು ಸಿಟ್ಟಿಗೆದ್ದು ಕೇಸರಜವಳಗಾ ಶಿಬಿರಾರ್ಥಿಗಳಾದ ರಾಮ ಮಸೂದೆ, ದತ್ತಾತ್ರೇಯ ಸಂಗೊಳ್ಳಿ, ಚಂದಪ್ಪ ಮುನ್ನೊಳಿ, ಬಾಹುಬರಿ ಪದ್ಮಣ, ಅಂಬೆ ಸುದರ್ಶನ, ಮಾದುಚಂದಾಲ್ ಮುಂತಾದ ಯವಕರನ್ನು ಬಂಧಿಸಿ ಡೋಗಿ ಬನದಲ್ಲಿ ಸಾಲಾಗಿ ಹಗ್ಗ ಕಟ್ಟಿನಿಲ್ಲಿಸಿ ಗುಂಡು ಹಾರಿಸಿದರು. ಸ್ಥಳದಲ್ಲಿಯೇ ಏಳು ಎಂಟು ಜನ ಮೃತಪಟ್ಟರು. ಗಾಯಗೊಂಡ ಕೆಲವರು ಓಡಿಹೋದರು. ಕೇಸರ ಜವಳಗಾದ ಮುಖಂಡರಾದ ಕಲ್ಮಣಕರ್‌ರವರು ಈ ಘಟನೆ ನಡೆದ ಸ್ಥಳಕ್ಕೆ ಭಾರತದ ಸೈನಿಕರನ್ನು ಕರೆತಂದರು. ಘಟನೆ ಪರಿಶೀಲಿಸಿದ ಸೈನ್ಯಧಿಕಾರಿ ಹೈದರಾಬಾದ್ ಪ್ರಾಂತ್ಯದಲ್ಲಿದ ನಿಜಾಂ ಅನುಯಾಯಿಗಳನ್ನು ಸದೆಬಡೆದರು. ೧೭ನೆ ಸೆಪ್ಟಂಬರ್ ೧೯೪೮ರಂದು ಈ ಹೋರಾಟ ಅಂತ್ಯಗೊಂಡಿತು. ನಿಜಾಂ ಮೀರ್‌ಉಸ್ಮನ್ ಅಲಿಖಾನನು ಭಾರತ ಸರಕಾರ ಒಕ್ಕೂಟಕ್ಕೆ ಸೇರಲು ಒಪ್ಪಿಕೊಂಡನು.[೯೮]

ಹೀಗೆ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳು ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಜನರನ್ನು ರಜಾಕಾರರ ದಬ್ಬಾಳಿಕೆಯಿಂದ ರಕ್ಷಿಸಿದವು. ಈ ಗಡಿಶಿಬಿರಾರ್ಥಿಗಳು ತಮ್ಮ ಜೀವದ ಹಂಗು ತೊರೆದು ಜನತೆಯ ಸುರಕ್ಷಿತೆಗಾಗಿ ಹೋರಾಡಿದರು. ಧುದನಿ, ಗೌಡಗಾಂವ, ವಾಗ್ದಾರಿಗಿ, ಕೇಸರ ಜವಳಗಾ, ಸಿಂದಗಿ ಹೀಗೆ ಅನೇಕ ಉಪ ಶಿಬಿರಗಳು ಹೈದರಾಬಾದ್ ಗಡಿ ಪ್ರದೇಶಗಳಲ್ಲಿ ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿದವು. ಪ್ರತಿಯೊಂದು ಶಿಬಿರಕ್ಕೆ ಒಬ್ಬ ಶಿಬಿರಾಧಿಪತಿ ಇದ್ದು, ಅವರ ಮಾರ್ಗದರ್ಶನದಲ್ಲಿ ಶಿಬಿರದ ಕಾರ್ಯಗಳು ನಡೆಯುತ್ತಿದ್ದವು. ಶಿಬಿರಗಳಲ್ಲಿ ಮದ್ದುಗುಂಡುಗಳನ್ನು ತಯಾರಿಸುವುದು ಯುವಕರಿಗೆ ಶಸ್ತ್ರಾಸ್ತ್ರ ತರಬೇತಿಗಳನ್ನು ಕೊಡುವುದು ಹಾಗೂ ರಜಾಕಾರರ ಹಾವಳಿಗೆ ತುತ್ತಾದ ಜನತೆಗೆ ಆಶ್ರಯ ಕೊಡುವುದು ಈ ಗಡಿಶಿಬಿರಗಳ ಮುಖ್ಯಕಾರ್ಯಗಳಾಗಿದ್ದವು. ಅನೇಕ ಶ್ರೀಮಂತರು ಹಾಗೂ ದಾನಿಗಳು ಶಿಬಿರಾರ್ಥಿಗಳಿಗೆ ಆಹಾರ, ಬಟ್ಟೆ ಹಾಗೂ ಹಣದ ಸಹಾಯ ಮಾಡುತ್ತಿದ್ದರು. ಶಿಬಿರಗಳಲ್ಲಿ ಪುರುಷರಲ್ಲದೆ ಮಹಿಳೆಯರು ಸಹ ವಿಮೋಚನ ಹೋರಾಟದಲ್ಲಿ ಪಾಲ್ಗೊಂಡರು. ಶಿಬಿರಾರ್ಥಿಗಳೊಂದಿಗೆ ಗುಪ್ತವಾಗಿ ಹೋರಾಡಿದ್ದರು. ಕಲಬುರ್ಗಿಯ ಪ್ರಮೀಳಬಾಯಿ ಪಳನೀಕರ್, ತುಂಗಾಬಳೂರಗಿಯವರು ಯಾದಗಿರಿ, ಅಫಜಲಪೂರ, ಆಳಂದ, ಶಹಾಪೂರ, ಸುರಪುರ, ಜೇವರ್ಗಿ, ಸೊಲಾಪುರ, ಸಿಂದಗಿ, ಅನೇಕ ಭಾಗಗಗಳಲ್ಲಿ ಸಂಚರಿಸಿ ವಿಮೋಚನಾ ಹೋರಾಟಗಾರರಿಗೆ

ಸಹಾಯ ಮಾಡಿದ್ದಾರೆ. ರಜಾಕಾರರ ಹಾಗೂ ಪಠಾಣರ ತಾಣಗಳ ಗ್ರಾಮಗಳಿಗೆ ಬುರ್ಖಾ ಹಾಕಿಕೊಂಡು ಹೋಗಿ ಸೂಕ್ಷ್ಮ ವಿಷಯಗಳನ್ನು ವಿಮೋಚನಾ ಹೋರಾಟಗಾರರಿಗೆ ಮುಟ್ಟಿಸುತ್ತಿದ್ದರು. ಈ ಗಡಿಶಿಬಿರಗಳ ಮುಖಂಡರು ಹಾಗೂ ಶಿಬಿರಾರ್ಥಿಗಳು ಹೈದರಾಬಾದ್ ನಿಜಾಂನಿಂದ ಮುಕ್ತಿಹೊಂದುವ ಹಂಬಲದಿಂದ ಸತತವಾಗಿ ನಿಜಾಂನ ವಿರುದ್ಧ ಹೋರಾಡಿದರು.

**ಅಡಿಟಿಪ್ಪಣಿಗಳು**

೧. ಮಹಾಬಲೇಶ್ವರಪ್ಪ ಬಿ.ಸಿ.(ಲೇ), **ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು,** ೧೯೯೭, ಪು.೮೯

೨. ಅದೇ, ಪು.೯೦

೩. ಅದೇ, ಪು.೯೧

೪. ಹಸನಪ್ಪ ದೊಡ್ಡಮನಿ, **ಸಂದರ್ಶನ,** ನಂದರಗಾ ದಿ.೧೪.೦೧.೨೦೦೨

೫. ಗುರುಭೀಮರಾವ್ ಪಾಟೀಲ, **ಸಂದರ್ಶನ,** ಮಧುಗುಣಕಿ, ದಿ.೨೬.೧೦.೨೦೦೧

೬. ಮಲಕಾಜಪ್ಪ ಜೀವೂರ, **ಸಂದರ್ಶನ,** ಮಾದನಹಿಪ್ಪರಗಾ, ದಿ.೨೬.೧೦.೨೦೦೧

೭. ಅದೇ

೮. ಅದೇ

೯. ಮಹಾಬಲೇಶ್ವರಪ್ಪ, ಬಿ.ಸಿ.(ಲೇ), **ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು,** ೧೯೯೭, ಪು.೧೦೦

೧೦. ಗುರುಶಾಂತಪ್ಪ ಭೂಸನೂರ **ಸಂದರ್ಶನ,** ದಿ.೨೬.೧೦.೨೦೦೧

೧೧. ಸ್ವಾಮಿತಡಕಲ, ಆರ್.ಎಸ್.(ಸಂ), **ಭಾರತ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸ್ಮರಣ** ಸಂಪುಟ, ಆಳಂದ ತಾಲೂಕಿನ ಸಂಪೂರ್ಣ ದರ್ಶನ, ೧೯೯೭, ಪು.೨೦೫

೧೨. ಶಂಕರರಾವ್ ವೀರಭದ್ರಪ್ಪ ಪಾಟೀಲ, **ಸಂದರ್ಶನ,** ಆಳಂದ, ದಿ.೨೦.೧೦.೨೦೦೧

೧೩. ಗೋಪಾಲರಾವ ಹೇಜೀಬ್(ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ,** ೨೦೦೧, ಪು.೧೯೪

೧೪. ಶರಣಗೌಡ ಪಾಟೀಲ ಇನಾಂದರ, **ಸಂದರ್ಶನ,** ಕಲಬುರ್ಗಿ, ದಿ.೨೯.೦೧.೨೦೦೨

೧೫. ಮಹಾಬಲೇಶ್ವರಪ್ಪ, **ಹೈದರಾಬಾದ್ ಕರ್ನಾಟಕ ರಾಜಕೀಯ ಚಳುವಳಿಗಳು,** ೧೯೯೭, ಪು.೧೦೧

೧೬. **ಕನ್ನಡ ಪ್ರಭ ದಿನಪತ್ರಿಕೆ,** ದಿ.೧೭ ಸೆಪ್ಟೆಂಬರ್, ೧೯೯೮

೧೭. **ಮಾಹಿತಿದಾರ** ಎಸ್.ಆರ್.ಮಣ್ಣೂರ

೧೮. ಕಲ್ಮಣಕರ್ ಡಿ.ಬಿ., **ಸಂದರ್ಶನ,** ದಿ.೨೮.೦೧.೨೦೦೨

## ಅಧ್ಯಾಯ ೪

# ವಿಮೋಚನಾ ಹೋರಾಟದಲ್ಲಿ ಮಾಧ್ಯಮಗಳ ಪಾತ್ರ

ಮನುಷ್ಯನು ಬೌದ್ಧಿಕವಾಗಿ ಬೆಳವಣಿಗೆ ಹೊಂದಿದಂತೆಲ್ಲ ಆತನು ಅನೇಕ ಆವಿಷ್ಕಾರಗಳಲ್ಲಿ ತೊಡಗಿಕೊಳ್ಳುತ್ತಾನೆ. ಆತನ ಪ್ರಗತಿಯ ಸಂಕೇತವಾಗಿ ಅನೇಕ ಮಾಧ್ಯಮಗಳು ಹುಟ್ಟಿಕೊಂಡಿವೆ. ಮಾನವನು ತನ್ನ ಅನುಕೂಲಕ್ಕೆಂದು ಸೃಷ್ಟಿಸಿದ ಈ ಮಾಧ್ಯಮಗಳು ದಿನಗಳೆದಂತೆ ಅವನ ಅಗತ್ಯ ವಸ್ತುಗಳಾಗಿ ಸ್ಥಾನ ಪಡೆದವು. ಹೀಗಾಗಿ ಯಾವುವೇ ಚಳುವಳಿಗಳೂ, ಹೋರಾಟಗಳು, ಯಶಸ್ವಿಯಾಗಿ ನಡೆಯಬೇಕಾದರೆ, ಸುದ್ದಿಯನ್ನು ಪ್ರಸಾರ ಮಾಡುವ ಮಾಧ್ಯಮಗಳ ಪಾತ್ರ ಅತ್ಯಂತ ಪ್ರಮುಖವಾಗಿರುತ್ತದೆ. ಪ್ರಾಚೀನ ಕಾಲದಲ್ಲಿ ಓಲೆಗಳು, ಸುದ್ದಿ ಹೇಳುವ ತಳವಾರ, ರಾಜರು ಕಳುಹಿಸುವ ದೂತರು, ಬಳೆಗಾರ ವೃತ್ತಿಯನ್ನು ಮಾಡುವವರು ಮುಂತಾದವರು ಈ ಮಾಧ್ಯಮಗಳ ಕೆಲಸ ನಿರ್ವಹಿಸುತ್ತಿದ್ದರು ಎಂಬುದಕ್ಕೆ ಅನೇಕ ಕನ್ನಡ ಕಾವ್ಯಗಳಲ್ಲಿ ಇಂತಹ ಪ್ರಸಂಗಗಳ ಕುರಿತಾದ ದಾಖಲೆಗಳನ್ನು ಗಮನಿಸಬಹುದು. ಉದಾಹರಣೆಗೆ ಕಾಳಿದಾಸನು "ಮೇಘದೂತ"ವೆಂಬ ನಾಟಕದಲ್ಲಿ ಮೋಡಗಳ ಮೂಲಕ ನಳ-ದಮಯಂತಿಯರ ಪ್ರೇಮ ಸಂದೇಶವನ್ನು ವಿನಮಯಿಸುತ್ತಾನೆ. ನಮ್ಮ ಜನಪದರ ಹಾಡುಗಳು, ಒಡಪುಗಳು, ಲಾವಣಿಗಳು, ಸಣ್ಣಾಟಗಳು, ದೊಡ್ಡಾಟಗಳು, ಬುಲಾಯಿ ಹಾಡುಗಳು ಮತ್ತು ಜೀಜೀ ಪದಗಳು ಸಹ ಸ್ವಾತಂತ್ರ್ಯ ಹೋರಾಟದಲ್ಲಿ ಸುದ್ಧಿಯನ್ನು ತಲುಪಿಸುವ ಮಹತ್ವದ ಮಾಧ್ಯಮಗಳಾಗಿ ಕೆಲಸ ನಿರ್ವಹಿಸಿರುವುದನ್ನು ಚರಿತ್ರೆಯ ಮೂಲಕ ತಿಳಿಯಬಹುದಾಗಿದೆ.

ಆಧುನಿಕವಾಗಿ ಬಿರುಸಿನ ಸುದ್ದಿ ಪ್ರಸಾರ ಮಾಡುವ ಪತ್ರಿಕೆಗಳು, ಆಕಾಶವಾಣಿ, ದೂರದರ್ಶನ, ಸಿನಿಮಾ ಮುಂತಾದ ಮಾಧ್ಯಮಗಳು ಸಹ ಸ್ವಾತಂತ್ರ್ಯ ಚಳುವಳಿಯಲ್ಲಿ ಹಾಗೂ ಹೈದರಾಬಾದ್ ವಿಮೋಚನಾ ಹೋರಾಟದ ಪ್ರಸಂಗಗಳಲ್ಲಿ ಹೆಜ್ಜೆ ಹೆಜ್ಜೆಗೂ ನಿರ್ವಹಿಸಿದ ಕಾರ್ಯವನ್ನು ಇಲ್ಲಿ ಸ್ಮರಿಸಲೇಬೇಕಾಗುತ್ತದೆ. ಅನುಕೂಲಕ್ಕಾಗಿ ಇಲ್ಲಿ ಕಲಬುರ್ಗಿ ಜಿಲ್ಲೆಯ ಮಾಧ್ಯಮಗಳ ಪಾತ್ರವನ್ನು ಸಮೀಕ್ಷಿಸಲಾಗಿದೆ. ಹೈದರಾಬಾದ್ ಕರ್ನಾಟಕವು ನಿಜಾಂ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟ ಸಂದರ್ಭದಲ್ಲಿ ಉರ್ದುವನ್ನು ಆಡಳಿತ ಭಾಷೆಯಾಗಿ ಜನರ ಮೇಲೆ ಒತ್ತಾಯ ಪೂರ್ವಕವಾಗಿ ಹೇರಿದ್ದರು.

ಈ ನೀತಿಯನ್ನು ವಿರೋಧಿಸಲು ಅಥವಾ ಇತರ ಭಾಷೆಗಳ ಜೀವಂತಿಕೆಯನ್ನು ಎತ್ತಿಹಿಡಿಯುವ ಸಲುವಾಗಿ ಆ ಭಾಗದಲ್ಲಿ ಮರಾಠಿ, ಕನ್ನಡ ಭಾಷೆಯ ಪತ್ರಿಕೆಗಳು ಹೊರಬಂದವು. "ಗುಲ್ಬರ್ಗಾ ಸಮಾಚಾರ" ಎಂಬ ಮಾರಾಠಿ ಪತ್ರಿಕೆ ಪರಶುರಾಮ ಗೋವಿಂದ ಬೋಡಸ್ ಅವರ ಮುದ್ರಣಾಲಯದಲ್ಲಿ ಮುದ್ರಣವಾಗಿ ಅವರ ಸಂಪಾದನೆಯಲ್ಲಿಯೇ ೧೮೭೬ರಲ್ಲಿ ಹೊರ ಬರುತ್ತಿತ್ತು. ಇದು ಜಿಲ್ಲೆಯ ಪ್ರಥಮ ಪತ್ರಿಕೆಯಾಗಿತ್ತು. ಅಲ್ಲದೆ ದತ್ತಾತ್ರೇಯರಾವ್ ಹಾಗೂ ಹಣಮಂತರಾವ್ ಸಂಪಾದಕತ್ವದಲ್ಲಿ "ನಾಗರಿಕ" ಎಂಬ ಕನ್ನಡ ಪತ್ರಿಕೆ ಕಲಬುರ್ಗಿಯಲ್ಲಿ ಜನ್ಮತಳೆದು ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಮತ್ತು ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟಕ್ಕೆ ಸ್ಫೂರ್ತಿ ನೀಡಿತು.

ಈ ದಿಶೆಯಲ್ಲಿ ಹೈದರಾಬಾದ್ ಕರ್ನಾಟಕದಲ್ಲಿ ಸಹ ಸ್ವಾತಂತ್ರ್ಯ ಚಳವಳಿ ಪೂರ್ಣ ಪ್ರಮಾಣದಲ್ಲಿ ನಡೆಯಿತು. ಸ್ವಾಮಿ ರಮಾನಂದ ತೀರ್ಥರು, ಸರ್ದಾರ ಶರಣಗೌಡಪಾಟೀಲ, ಪುಂಡಲೀಕಪ್ಪ, ಅಲವಂಡಿ ಶಿವಮೂರ್ತಿಸ್ವಾಮಿ, ಕೊಲ್ಲೂರು ಮಲ್ಲಪ್ಪ, ಡಿ.ಬಿ.ಕಲ್ಮಣಕರ್, ಜಗನ್ನಾಥರಾವ್ ಚಂಡ್ರಿಕಿ, ಗುರುಭೀಮರಾವ್ ಪಾಟೀಲ್, ಅಣ್ಣಾರಾವ್ ಗಣಮುಖಿ, ಚಂದ್ರಶೇಖರ ಪಾಟೀಲ ಮೊದಲಾದವರೊಂದಿಗೆ ಸಾವಿರಾರು ಜನರು ಸ್ವಾತಂತ್ರ್ಯ ಹೋರಾಟಕ್ಕಿಳಿದರು. ಆ ಸಂದರ್ಭದಲ್ಲಿಯೇ ಪತ್ರಿಕೆಗಳ ಮೂಲಕ ಇವರೆಲ್ಲರು ಸ್ಫೂರ್ತಿಗೊಂಡರು. ಈ ಪತ್ರಿಕೆಗಳಲ್ಲಿ ನಮಗೆ ಪ್ರಮುಖವಾಗಿ ಕಂಡು ಬರುವುದು "ದಿ ಡೆಮೋಕ್ರೆಟಿಕ್", "ಸಂಯುಕ್ತ ಕರ್ನಾಟಕ" ಮತ್ತು 'ಇಮರೋಜ್' ಪತ್ರಿಕೆಗಳು. ಇಷ್ಟಲ್ಲದೆ ಮೌಖಿಕ ಚರಿತ್ರೆಯಾಗಿ ಲಾವಣಿಗಳು, ಬುಲಾಯಿ ಹಾಡುಗಳು, ಕೀರ್ತನೆಗಳು ಈ ದಿಶೆಯಲ್ಲಿ ಸಮೂಹ ಮಾಧ್ಯಮಗಳಾಗಿ ಕೆಲಸ ಮಾಡಿವೆ. ವಿಮೋಚನಾ ಹೋರಾಟದ ಸಂದರ್ಭದಲ್ಲಿ ಸುದ್ದಿ ವಿಶ್ಲೇಷಣೆ ಮಾಡುವುದು ಪತ್ರಿಕೋದ್ಯಮದ ಕೆಲಸ. ಪತ್ರಿಕೆಗಳು ಪ್ರಗತಿಪರ ವಿಚಾರಗಳನ್ನು ಕ್ರಿಯಾತ್ಮಕವಾಗಿ ಬೆಳಸಲು ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿವೆ. ಸ್ವಾವಲಂಬತ್ವ-ಸ್ವಾಭಿಮಾನ, ಘನತೆ-ಗೌರವಗಳನ್ನು ತಿಳಿಸುವುದರಲ್ಲಿ ಹಿರಿದಾದ ಸೇವೆ ಮಾಡುತ್ತಾ ಬಂದಿವೆ. ಮೊದ ಮೊದಲು ಕರ ಪತ್ರಗಳ ಮೂಲಕ ಮೊಳಕೆಯೊಡೆದು ಬಂದ ವಿಚಾರಧಾರೆಗಳನ್ನು ಮತ್ತು ವಾಸ್ತವ ಚಿತ್ರಗಳನ್ನು ತೋರಿಸಲು ಈ ಪತ್ರಿಕೆಗಳು ಬೃಹದಾಕಾರ ವೃಕ್ಷಗಳಾಗಿ ಬೆಳೆದು ನಿಂತವು.[೧]

ಪತ್ರಿಕೆಗಳಲ್ಲಿ ಹಲವಾರು ವಿಭಾಗಗಳಿದ್ದು, ಅದನ್ನು ಸಂಪಾದಕೀಯ, ಜಾಹಿರಾತು, ತನಿಖಾ ಮತ್ತು ರಾಜಕೀಯ ವಿಭಾಗಗಳೆಂದು ಹತ್ತಾರು ವಿಭಾಗಗಳಾಗಿ ಮಾಡಿರುತ್ತಾರೆ. ಇತಿಹಾಸದ ಪುಟಗಳನ್ನು ತಿರುವಿದಾಗ ನಮಗೆ ಹೈದರಾಬಾದ್ ಕರ್ನಾಟಕ ವಿಮೋಚನೆಗಾಗಿ ಸೇನೆ ಕಟ್ಟಲು ಮತ್ತು ಒಂದು ರೀತಿಯ ಹೋರಾಟ ಮಾಡಲು ಈ ಪತ್ರಿಕಾ ವಿಭಾಗಗಳು ಬಹಿರಂಗವಾಗಿ ಕೆಲಸ ಮಾಡಿವೆ. ಗಜೇಂದ್ರಘಡ, ಗದಗ, ಕೊಪ್ಪಳ, ಮುಂಡರಗಿ, ಸುರಪುರ ಭಾಗಗಳು ರಾಷ್ಟ್ರದ ಸ್ವಾತಂತ್ರ್ಯಕ್ಕೂ ಹಾಗೂ ಹೈದರಾಬಾದ್ ವಿಮೋಚನೆಗೂ ತಮ್ಮದೇ ಕೊಡುಗೆ ನೀಡಿವೆ. ಹಾಗೇ ಕಲಬುರ್ಗಿ ಜಿಲ್ಲೆಯೂ ಒಂದು. ಇದೇ ಸಂದರ್ಭದಲ್ಲಿ ಇಡೀ ಚಳವಳಿಯ ಆಂತರಿಕ ಒಳ ಹೊರವುಗಳ ಕುರಿತು ಚಿಂತಿಸಲು ಪ್ರಾರಂಭಿಸಲಾಯಿತು. ವಸಾಹತುಶಾಹಿಗಳ ಆಳ್ವಿಕೆಗಳಿಗಿಂತಲೂ ದೇಶೀಯ ಜನರಾಗಿದ್ದಂತಹ ನಿಜಾಂನ ಕ್ರೂರ ಆಳ್ವಿಕೆಯನ್ನು ಹತ್ತಿಕ್ಕಲು ಈ ದೆಸೆಯಲ್ಲಿ ಹೈದರಾಬಾದ್ ನಾಡಿನ ಜನರಲ್ಲಿ ಸ್ವಾತಂತ್ರ್ಯದ ಅರಿವನ್ನು ಮೂಡಿಸುವಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಮುಂದಾಯಿತು. ಆ ಹೊತ್ತಿಗೆ ಹೋರಾಟಗಾರರಾದ ರಾಘು ಜಹಗೀರದಾರ ಅವರು "ಅಮೃತ ಬಜಾರ" ಪತ್ರಿಕೆ ಆರಂಭಿಸಿದರು. ಈ ಪತ್ರಿಕೆಯಲ್ಲಿ ಸ್ವಾತಂತ್ರ್ಯ ಚಳುವಳಿಯ ವಿವಿಧ ರೂಪುರೇಷೆ ವಿವರಿಸಿ ಮುದ್ರಿಸಲಾಗುತ್ತಿತ್ತು. ಇದರಿಂದ ಜನ ಜಾಗೃತರಾಗ ತೊಡಗಿದರು. ಅನೇಕ ರಾಜಕೀಯ ಮುಖಂಡರ ಕ್ರಾಂತಿಕಿಡಿಗಳು ಈ ಪತ್ರಿಕೆಯ ಮೂಲಕ ಹಾರಿದವು. ಸಾಮಾನ್ಯ ಜನರು ಸಹ ಈ ಪತ್ರಿಕೆಯಿಂದ ಪ್ರಭಾವಿತರಾಗಿ ರಾಜಕೀಯ ವಲಯದಲ್ಲಿ ಸೇರಲು ಮುಂದಾದರು. ಇದನ್ನು ಕಂಡ ನಿಜಾಂ ಸರಕಾರ ದತ್ತಾತ್ರೇಯ ಅವರಾದಿಯವರನ್ನು ಬಂಧಿಸಿ ಜೇಲಿನಲ್ಲಿ ಇರಿಸಿತು. ಅವರಾದಿಯವರು ಕೈದಿಗಳಾದಾಗ ದತ್ತಾತ್ರೇಯ ಹೇರೂರು ಮಾಸ್ತರರು ಕೈ ಬರಹದ ಪತ್ರಿಕೆಯನ್ನು ಆರಂಭಿಸಿದರು. ಜನ ಜಾಗೃತಿ ಸಲುವಾಗಿ ರಾಷ್ಟ್ರ ಭಕ್ತಿಯ ಉತ್ಸಾಹ ತುಂಬಲು ಸಾಹಿತ್ಯಿಕ, ಸಾಂಸ್ಕೃತಿಕ ಸಂಗತಿಗಳನ್ನು ಪ್ರಕಟಿಸುವ ಮೂಲಕ ಕೆಲಸ ಮಾಡಿದ್ದು ಇದೊಂದು ದೊಡ್ಡ ಪ್ರಯತ್ನ. ಕೈ ಬರಹದ ಪತ್ರಿಕೆ ಅಂದು ಬಹಳಷ್ಟು ಪ್ರಚಾರ ಪಡೆಯಿತು. ಇದರ ಪರಿಣಾಮ ಅರಿತುಕೊಂಡು ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದ ವಸಂತ ಕುಷ್ಟಗಿ ಮತ್ತು ಲಕ್ಷ್ಮೀಕಾಂತ ಪಟ್ಟಣಕರ್ ಸೇರಿಕೊಂಡು ನಾವು ಯಾಕೆ ದೇಶಭಕ್ತಿಯನ್ನು ಜನರಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಮೂಡಿಸಬಾರದು, ಎಂದು ವಿಚಾರ ಮಾಡಿ, ಈ ರಜಾಕಾರರ ದೌರ್ಜನ್ಯ ಮತ್ತು ದಬ್ಬಾಳಿಕೆಯನ್ನು ವಿರೋಧಿಸುವ ಸಲುವಾಗಿ ಪತ್ರಿಕೆಯನ್ನು ಆರಂಭಿಸಬೇಕೆಂದು ವಿಚಾರಮಾಡಿದರು. ಆಗ ಇವರೆಲ್ಲರ ನೇತೃತ್ವದಲ್ಲಿ "ಉದಯ" ಎಂಬ ಕೈ ಬರಹದ ಪತ್ರಿಕೆಯನ್ನು ಹೊರಬಂದಿತು. ಇದರಂತೆ ಬಂದ "ಪ್ರಕಾಶ" ಎಂಬ ಕೈ ಬರಹದ ಪತ್ರಿಕೆ ಹನುಮಂತರಾವ್ ಕನ್ನಾಳ ಅವರ ಸಂಪಾದಕತ್ವದಲ್ಲಿ ಕೆಲವು ಸಂಚಿಕೆಗಳಲ್ಲಿ ಹೊರಬಂದಿತು.

೧೯೪೨ರ ಹೊತ್ತಿಗೆ ಕಲಬುರಗಿ ಜಿಲ್ಲೆಯ ಪ್ರಮುಖ ಹೋರಾಟಗಾರರು ಸ್ವಾತಂತ್ರ್ಯ ಹೋರಾಟ ಮತ್ತು ವಿಮೋಚನಾ ಹೋರಾಟಕ್ಕೆ ಪ್ರೇರಣೆ ನೀಡುವದರಲ್ಲಿ ಮುಖ್ಯರಾದರು. ಇವರೆಲ್ಲರಿಗೂ ಸುರುಪುರದ ರಂಗಂ ಪೇಟೆಯ ಬುದ್ಧಿವಂತ ಶೆಟ್ಟರು ತಮ್ಮ ಮನೆಯಲ್ಲಿ ವಿಮೋಚನಾ ಹೋರಾಟದ ಚಟುವಟಿಕೆಗಳನ್ನು ನಡೆಸಲು ಸ್ಥಳ ಒದಗಿಸಿಕೊಟ್ಟರು. ಅವರು ಆ ಸಂದರ್ಭದಲ್ಲಿಯೇ "ಅರುಣ" ಎಂಬ ಪತ್ರಿಕೆಯನ್ನು ಮುದ್ರಿಸುತ್ತಿದ್ದರು. ಇವರು ಹೋರಾಟದ ಸಮಯದಲ್ಲಿ ಮಾಡಿದ ಕೆಲಸ ತುಂಬಾ ಗಮನಾರ್ಹವಾದದ್ದು.

ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಈ ಹೈದರಾಬಾದ್ ಕರ್ನಾಟಕದ ಭಾಗದಲ್ಲಿ ಸ್ವಾತಂತ್ರ್ಯದ ಕಹಳೆ ಮೊಳಗಲಿಲ್ಲ. ಬಿಡುಗಡೆಯ ಬೇಡಿಯಿಂದ ಹೊರ ಬರಲಾರದ್ದನ್ನು ಕಂಡು ಜನ ರೊಚ್ಚಿಗೆದ್ದರು. ಸ್ವಾತಂತ್ರ್ಯ ಹೋರಾಟಕ್ಕಿಂತ ಈ ಭಾಗ ವಿಮೋಚನೆಗಾಗಿ ಹಿಂಸಾಚಾರಕ್ಕೆ ಇಳಿಯಿತ್ತು. ಆಗ ಅನಿವಾರ್ಯವಾಗಿ ಭಾರತ ಸರಕಾರ ಪೊಲೀಸ್ ಕಾರ್ಯಚರಣೆ ಮಾಡಿತು. ಅದರ ತರುವಾಯ ಇಲ್ಲಿನ ಸ್ವಾತಂತ್ರ್ಯದ ರೀತಿ ನೀತಿಗಳನ್ನು ತಿಳಿಸಲು ಭೀಮಸೇನರಾಯರು "ಮಂಜು" ಪತ್ರಿಕೆ ಪ್ರಾರಂಭಿಸಿ, ಅಂದಿನ ಅನೇಕ ಪತ್ರಿಕೆಗಳಲ್ಲಿ ರೋಚಕ ವಿಷಯಗಳನ್ನು ತಿಳಿಸುವುದರೊಂದಿಗೆ, ಯುವಕರ ಪ್ರತಿಭೆ ಅರಳಲು ಸಹಕಾರಿಯಾದರು. ಈ ಎಲ್ಲಾ ಪತ್ರಿಕೆಗಳು ವಿಮೋಚನೆಗೆ ತಮ್ಮ ಕಾಣಿಕೆ ನೀಡಿವೆ. ಇವೆಲ್ಲವು ಇತಿಹಾಸದ ದೃಷ್ಟಿಯಿಂದ ನಮಗೆ ಮುಖ್ಯವಾಗಿ ಕಂಡುಬರುತ್ತವೆ. ಅಲ್ಲದೆ ಮರಾಠಿ ಸಾಪ್ತಾಹಿಕ ಪತ್ರಿಕೆಯಾದ "ಖೈರಖಾಹ ದಕನ್" ಪತ್ರಿಕೆಯೂ ೧೯೦೭ರಲ್ಲಿ ಪರಶುರಾಮ ಗೋವಿಂದ ಬೋಡಸರೇ ಅವರ ಸಂಪಾದಕತ್ವದಲ್ಲಿ ಹೊರ ಹೊಮ್ಮಿತು.

೧೯೩೦ರಲ್ಲಿ ರಂಗಂಪೇಟೆಯ ಗುರುಯ್ಯ ಸುಗೂರುಮಠ ಅವರು "ನೈಜಾಂ ನ್ಯಾಯತೀರ್ಪು" ಎಂಬ ಮಾಸ ಪತ್ರಿಕೆಯನ್ನು ಹೈದರಾಬಾದ್ ವಿಮೋಚನಾ ವೇಳೆಗೆ ಮತ್ತು ಯಾದಗಿರಿಯಲ್ಲಿ ಬಸವರಾಜ ಶಾಸ್ತ್ರೀ ಅವರು "ಧರ್ಮಸಂಜೀವಿನಿ" ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಗಳಲ್ಲಿ ಹೈದರಾಬಾದ್ ನಿಜಾಂನ ರಾಜಕೀಯ ಚಟುವಟಿಕೆಗಳನ್ನು ಕುರಿತು ಲೇಖನಗಳು ಬರುತ್ತಿದ್ದವು.

ರಮಾನಂದ ತೀರ್ಥರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ಸ್ವಾತಂತ್ರ್ಯದ ನಂತರ ಹೈದರಾಬಾದ್ ವಿಮೋಚನಾ ಹೋರಾಟಕ್ಕೆ ನಾಂದಿ ಹಾಡಿದರು. ಆಗ ಸಂಸ್ಥಾನದ ಪ್ರಮುಖ ಸ್ಥಳಗಳಲ್ಲೂ ಸಂಚರಿಸಿ ನಿಜಾಂನ ಸಾಮ್ರಾಜ್ಯವನ್ನು ಕಿತ್ತೊಗೆಯಲು ಒಂದು ಕಡೆ ಹೆಣಗಿದರು. ಭಾರತದೊಂದಿಗೆ ಹೈದರಾಬಾದ್ ಸಂಸ್ಥಾನ ವಿಲೀನವಾಗಲು ಒಪ್ಪದಿದ್ದಾಗ, ಸ್ವಾಮಿ ರಮಾನಂದ ತೀರ್ಥರು ಹೈದರಾಬಾದ್ ನಿಜಾಂನ ವಿರುದ್ಧ ಹೋರಾಡಲು ಸಿದ್ಧರಾದರು. ಇಲ್ಲಿರುವ ಮೊಗಲಾಯಿ

ಹಾಗೂ ಕರ್ನಾಟಕದ ಅನೇಕ ಪ್ರದೇಶಗಳನ್ನು ಒಂದುಗೂಡಿಸಲು ಸಾಕಷ್ಟು ದುಡಿದರು. ಆದರೆ ರಾಜಕೀಯ ಹೋರಾಟದಿಂದ ಸಾಧ್ಯವಾಗದಿದ್ದಾಗ ಅನಿವಾರ್ಯವಾಗಿ ಬರಹದ ಮೂಲಕ ರಾಜಕೀಯ ಇತಿಹಾಸವನ್ನು ಹೊರ ಹಾಕಲು ಶ್ರಮಿಸಿದರು.

ಆ ಸಂದರ್ಭದಲ್ಲಿ ನಿಜಾಂ ಸರಕಾರ ಕೊಟ್ಟ, ಸರಕಾರಿ ಕೆಲಸದ ಹಂಗು ತೊರೆದು ರಾಜೀನಾಮೆ ನೀಡಿ ಹೊರ ಬಂದವರಲ್ಲಿ ದತ್ತಾತ್ರೇಯರಾವ್ ಅವರಾದಿ, ವಿ.ಸಿ.ದೇವಳಗಾಂವಕರ್, ಎಸ್. ಹನುಮಂತರಾವ್, ಶಂಕರರಾವ್ ವಾಂಝುರೇ, ತುಕರಾಮ ಕುಲಕರ್ಣಿ, ಅನಂತಶರ್ಮ, ನಾರಾಯಣ ರಾವ್ ಕಾನ್ಯಾಳ್ ಹಾಗೂ ರಘು ಜಾಗೀರದಾರ ಮೊದಲಾದವರು ಸೇರಿದ್ದರು. ಅದೇ ಹೊತ್ತಿಗೆ ಇವರುಗಳು ಅನೇಕ ಕೈ ಬರಹ, ಪತ್ರಿಕೆಗಳನ್ನು ಬರೆದು ಪ್ರಚಾರ ಕೈಗೊಂಡರು. ರಾಷ್ಟ್ರಾಭಿಮಾನದ ಪ್ರಜ್ಞೆ ಜನರಲ್ಲಿ ಮೂಡಿಸಲು ಪ್ರಯತ್ನಿಸಿದರು. ತಮ್ಮ ಜೀವದ ಹಂಗು ತೊರೆದು ವಿಮೋಚನಾ ಹೋರಾಟಕ್ಕೆ ಸಿದ್ಧರಾದರು. ಆಗ ಹೈದರಾಬಾದ್ ಕರ್ನಾಟಕದ ಗಡಿ ಭಾಗವಾಗಿದ್ದ ಗದಗದಲ್ಲಿ ವಿ.ಎಚ್.ದೇಸಾಯಿ ಇವರಿಂದ "ಕರ್ನಾಟಕ ಬಂಧು" ಎಂಬ ಪತ್ರಿಕೆ ಹೊರ ಬಂದಿತ್ತು(೧೯೪೫). ಅವರು ರಾಷ್ಟ್ರೀಯ ಆಂದೋಲನದಲ್ಲಿ ತುಂಬಾ ಉತ್ಸುಕನಾಗಿ ಸೇರಿಕೊಂಡು, ಹೋರಾಟಕ್ಕೆ ಮುಂದಾಗಿ ಹೈದರಾಬಾದ್‌ಗೆ ಹೋಗಿ ಅಲ್ಲಿ ಉರ್ದು ಕಲಿತು ಹೊಸ ಪರಿಸರದಲ್ಲಿ ಬೆಳೆದು ಬಂದರು. ಅದೇ ಹೊತ್ತಿಗೆ ಆರ್.ಜಿ.ಜಹಗೀರ್‌ದಾರ್ "ಪ್ರಜಾ" ಪತ್ರಿಕೆ ಹೊರಡಿಸುತ್ತಿದ್ದರು. ಆ ಪತ್ರಿಕೆಗೆ ಬೇಕಾದ ಮಾಹಿತಿಗಳ ಸಲುವಾಗಿ ಅದನ್ನು ನಡೆಸಿಕೊಂಡು ಬರುವುದರ ಉದ್ದೇಶಕ್ಕಾಗಿ ವಿ.ಎಚ್. ದೇಸಾಯಿರವರು ಈ ಪತ್ರಿಕೆಯ ಕೆಲಸಗಳಿಗೆ ಸಿದ್ಧರಾದರು. "ಪ್ರಜಾ" ಪತ್ರಿಕೆಗೆ ಹೈದರಾಬಾದ್ ಕರ್ನಾಟಕದ ವಾರಪತ್ರಿಕೆ ಎಂಬ ಹೆಗ್ಗಳಿಕೆಯಾಯಿತು. ಸ್ವಾತಂತ್ರ್ಯದ ಬೀಜ ಬಿತ್ತುವ ಮುಂಚೂಣಿಯಲ್ಲಿ ನಡೆದ ಈ ಪತ್ರಿಕೆ ಒಂದು ಸೇತುವೆ ನಿರ್ಮಿಸಿತು.

ಹೈದರಾಬಾದ್‌ನಲ್ಲಿರುವ ಹೆಸರಾಂತ ಸ್ವಾತಂತ್ರ್ಯ ಹೋರಾಟಗಾರರಾದ ಜಿ.ರಾಮಚಾರ, ಎನ್. ಎ. ಅಗಡಿರಂತವರು ಹೋರಾಟದ ಕೆಚ್ಚೆದೆಗೆ ಸ್ಫೂರ್ತಿನೀಡಿದರು. ಹೊಸ ಭರವಸೆ ಹುಟ್ಟಿಸುವ ಕೆಲಸ ವಿ.ಎಚ್. ದೇಸಾಯಿ ಮಾಡಿದರು. ಜಿ.ಎಸ್. ಮೇಲುಕೋಟೆ, ಜಗನ್ನಾಥರಾವ್ ಚಂಡ್ರಿಕಿ ಹಾಗೂ ಹಲವರು ಸೇರಿಕೊಂಡು ದೇಸಾಯಿ ಅವರು ತೊಡಗಿದ ಕೆಲಸಕ್ಕೆ ಸಹಕಾರ ನೀಡುತ್ತಿದ್ದರು. ಈ ಪತ್ರಿಕಾ ಕಾರ್ಯಲಯ ಪ್ರಮುಖವಾಗಿ ಹೋರಾಟಗಾರರಿಗೆ ಆಶ್ರಯವನ್ನು ನೀಡುತ್ತಿತ್ತು. ಎಲ್ಲಾ ಹೋರಾಟಗಾರರ ಚಟುವಟಿಕೆಗಳ ಕೇಂದ್ರ ಸ್ಥಳವೂ ಅದಾಗಿತ್ತು. ಈ ಬೆಳವಣಿಗೆಯಿಂದಾಗಿ ಅನೇಕ ಕ್ರಾಂತಿಕಾರಿಕ ಲೇಖನಗಳು ಹೊರ ಬರಲು ಆರಂಭವಾದವು. ಕೆಲವು ವಿಷಯಗಳನ್ನು ಹೈದರಾಬಾದಿನಲ್ಲಿ ನೇರವಾಗಿ ಹೇಳಲಿಕ್ಕೆ ಹೋಗದೆ, ಬೇರೆ ವಿಷಯಗಳನ್ನು ಹೇಳಿ ಆ ಮೇಲೆ ಚಳುವಳಿಯ ವಿಷಯವು

ಪ್ರಸ್ತಾಪಿಸಲ್ಪಡುತ್ತಿತ್ತು. ಪತ್ರಿಕೆ ಕಂಡು ಅನೇಕರು ಪತ್ರಗಳನ್ನು ಬರೆದು ತಮ್ಮ ಸಂತಸ ಹಂಚಿಕೊಂಡ ಉದಾಹರಣೆಗಳನ್ನು ವಿ.ಎಚ್.ದೇಸಾಯಿ ಅವರು ಹೇಳುತ್ತಾರೆ.

### ೪.೧. ದಿ ಡೆಮಾಕ್ರಾಟ್ ಪತ್ರಿಕೆ

೧೯೪೭ ಜನೇವರಿ ೨೬ರಂದು "ದಿ ಡೆಮೊಕ್ರಾಟ್" ಪತ್ರಿಕೆ ವಿ.ಎಚ್. ದೇಸಾಯಿ ಅವರ ಸಂಪಾದಕತ್ವದಲ್ಲಿ ಹೊರಬಂದಿತು. ಈ ಪತ್ರಿಕೆ ಹುಟ್ಟಿದ್ದು "ಚಂಚಲಗೂಡಾ" ಜೇಲಿನಲ್ಲಿ. ಹನ್ನೆರಡು ಪುಟಗಳಲ್ಲಿ ಅನೇಕ ಚಿತ್ರಗಳನ್ನು ಒಳಗೊಂಡ ಈ ಪತ್ರಿಕೆ "ತ್ರಿವರ್ಣಧ್ವಜ", ಗಾಂಧೀಜಿ ಅವರ ಭಾವಚಿತ್ರವನ್ನು ಮುಖಪುಟಗಳಲ್ಲಿ ಮುದ್ರಿಸಿ, ದೇಶಪ್ರೇಮದ ಕಿಚ್ಚು ಹೆಚ್ಚಿಸುವ ಲೇಖನಗಳಿಂದ ಕೂಡಿದ ಸುಂದರವಾಗಿ ಹೊರಬಂದಿತು. ಪತ್ರಿಕೆಯ ಸಂಪಾದಕೀಯ ನೀತಿ ಸ್ಪಷ್ಟ ಮತ್ತು ಹರಿತವೂ ಆಗಿತ್ತು. ಅಲ್ಲದೆ ಹೊಸ ಪೀಳಿಗೆಗೆ ಮಾಹಿತಿ ನೀಡುವ ಉದ್ದೇಶವಿತ್ತು. ರಾಷ್ಟ್ರದ ಅಭಿವೃದ್ಧಿಗಾಗಿ ಸ್ವತಂತ್ರ ವಿಚಾರ ಮಾಡಲು ಪ್ರೇರೇಪಿಸುವ ಶಕ್ತಿಯನ್ನು ಹೊಂದಿತ್ತು. ಈ ಪತ್ರಿಕೆಯನ್ನು ರಾಜಕೀಯ ಬಂಧಿಗಳು ರಾಜಕೀಯ ಬಂಧಿಗಳಿಗಾಗಿಯೇ ನಡೆಸುತ್ತಿದ್ದರು. "ದಿ ಡೆಮಾಕ್ರಾಟ್" ಪತ್ರಿಕೆ ತನಗಾಗಿಯೇ ಒಂದು ಸ್ಥಾನವನ್ನು ಭದ್ರಪಡಿಸಿಕೊಂಡಿತು.[೨]

ಆಗ ಹೈದರಾಬಾದ್ ಕರ್ನಾಟಕದ ಪರಿಸ್ಥಿತಿ ಅರಿತ ಸ್ವಾಮಿ ರಮಾನಂದ ತೀರ್ಥರು ಹೋರಾಟದಲ್ಲಿ ಭಾಗವಹಿಸಿದ್ದರು. ನಿಜಾಂ ಹಿಂದೂಗಳ ಮೇಲೆ ತನ್ನ ಮಿತಿಮೀರಿದ ಆಡಳಿತವನ್ನು ಹೇರಿದನು. ಇದರಿಂದಾಗಿ ಲೂಟಿ, ಹೆಣ್ಣುಮಕ್ಕಳ ಮಾನ ಹಾಗೂ ಪ್ರಾಣಹಾನಿ, ಕಾಂಗ್ರೆಸ್ ನಾಯಕರ ಬಂಧನ ತಡೆಯಿಲ್ಲದೆ ನಡೆದವು. ಆಗ ಚಂಚಲಗೂಡಾ ಕೇಂದ್ರ ಕಾರಾಗೃಹದಲ್ಲಿ ಸ್ವಾಮಿ ರಮಾನಂದರು, ಬಿ.ಕೃಷ್ಣರಾವ್, ಡಾ.ವಿ.ಎಸ್.ಮೇಲುಕೋಟೆ, ಕಾಶಿನಾಥರಾವ್, ವಿ.ಎಚ್. ದೇಸಾಯಿ ಮುಂತಾದ ನಾಯಕರು ಬಂಧಿಯಾಗಿದ್ದರು. ಜೇಲಿನಲ್ಲಿದ್ದವರೆಲ್ಲ ಸೇರಿ ತಂದ "ದಿ ಡೆಮಾಕ್ರಾಟ್" ಪತ್ರಿಕೆ ಕ್ರಾಂತಿಯನ್ನೇ ಹುಟ್ಟುಹಾಕಿತು. ವಾರದಲ್ಲಿ ಎರಡು ಸಲ ಈ ಪತ್ರಿಕೆ ಹೊರಬರುತ್ತಿತ್ತು. ಇದರಲ್ಲಿ ಈ ಭಾಗದ ಅನೇಕರು ಲೇಖನ ಬರೆದರು. ಕಮ್ಯುನಿಸ್ಟ್ ನಾಯಕರು ಮತ್ತು ಸಮಾಜವಾದಿ ಮುಂಖಡರು ಬರೆದ ಲೇಖನಗಳು ಪ್ರಕಟವಾಗುತ್ತಿದ್ದವು. ಇವರಲ್ಲಿ ಸಂಪಾದಕೀಯವು ದೇಸಾಯಿ ಅವರಿಂದ ಮೂಡಿ ಬರುತ್ತಿತ್ತು. ಅನೇಕರು ಬರೆದ ಲೇಖನಗಳು ವಿಮೋಚನಾ ಹೋರಾಟಕ್ಕೆ ಸ್ಫೂರ್ತಿ ನೀಡುತ್ತಿದ್ದವು. ಹಗಲಿರುಳು ಪತ್ರಿಕೆಗೆ ಹತ್ತಾರು ಜನರು ಶ್ರಮವಹಿಸಿ ಬರವಣಿಗೆಯಲ್ಲಿ ನಿರತರಾಗುತ್ತಿದ್ದರು. ಇದು ಕೈಯಿಂದ ಕೈಗೆ ಪ್ರಸಾರವಾಗುವ ಪತ್ರಿಕೆಯಾಗಿತ್ತು. ಅಂದರೆ ಪತ್ರಿಕೆ ಓದಿದ ನಂತರ ಮತ್ತೊಬ್ಬರಿಗೆ ಓದಲು ಕೊಡಬೇಕಾಗಿತ್ತು. ಈ ಪ್ರಯೋಗದಿಂದ ಎಲ್ಲರಿಗೂ ಹೊಸ ವಿಚಾರಗಳು ತುಂಬ ಬೇಗನೆ ತಲುಪುತ್ತಿದ್ದವು. ಮುಖ ಪುಟಕ್ಕೆ ಇಲ್ಲಿರುವ ಅನೇಕ ಕಲಾವಿದರ ಚಿತ್ರಗಳನ್ನು

ಬಳಸಿಕೊಂಡು ಪತ್ರಿಕೆಯ ಸೌಂದರ್ಯ ಹೆಚ್ಚಿಸುತ್ತಿದ್ದರು. ಖಾಸಗಿ ಪ್ರಸಾರವೆನಿಸದೇ, ಸಾರ್ವತ್ರಿಕ ಪತ್ರಿಕೆಯಾಗಿ ಇದು ಹೊರ ಹೊಮ್ಮಿತು.

ಹಗಲು ಹೊತ್ತು ಬಂಧಿಗಳು ಜೇಲಿನ ಮುಂದಿನ ಆವರಣದಲ್ಲಿ ಕೂಡಿಕೊಂಡೇ "ದಿ ಡೆಮಾಕ್ರಾಟ್" ಪತ್ರಿಕೆ ಓದಿಕೊಳ್ಳುತ್ತಿದ್ದರು. ಒಬ್ಬರು ಓದಿ ಹೇಳಿದರೆ ಎಲ್ಲರೂ ಕುಳಿತು ಕೇಳುತ್ತಿದ್ದರು. ಆಮೇಲೆ ಆ ಪತ್ರಿಕೆಯ ವಿಚಾರಗಳ ಬಗ್ಗೆ ಟೀಕೆ, ಚರ್ಚೆಗಳು ನಡೆಯುತ್ತಿದ್ದವು. "ದಿ ಡೆಮಾಕ್ರಾಟ್" ನೀತಿಯನ್ನು ಹೊಂದಿದ್ದಂತಹ ಜನರೆಲ್ಲ ಸೇರಿ ಕೊಂಡು ತಮ್ಮ ಜೇಲನ್ನೆ "ಬಂಧೀನಗರ ಗಣಾರಾಜ್ಯವೆಂದು" ಕರೆದುಕೊಂಡರು. ಈ ಪತ್ರಿಕೆಯ ಸ್ಫೂರ್ತಿಯಿಂದಲೇ ಬಂಧಿನಗರ ಶಾಸನ ಸಭೆಯೊಂದನ್ನು ಮಾಡಿಕೊಂಡಿದ್ದರು. ಅದಕ್ಕೆ ಕೆ.ಎಸ್.ವೈದ್ಯ ಎಂಬುವರನ್ನು ನೇಮಕ ಮುಖ್ಯಸ್ಥರಾಗಿ ನೇಮಕ ಮಾಡಿದರು".[೩]

ಇವರ ಸಂಘಟನಾ ಕ್ರಿಯೆಗಳನ್ನು ಗಮನಿಸಿದ ನಿಜಾಂನು ಜೈಲಿನಲ್ಲಿದ್ದ ಸ್ವಾಮಿ ರಮಾನಂದ ತೀರ್ಥರನ್ನು ಸಂಗಾರೆಡ್ಡಿ ಜೈಲಿಗೆ ವರ್ಗಾಯಿಸಿದ. ಆದರೆ ರಾಮಕೃಷ್ಣರಾಯರು ಮತ್ತು ಅವರ ಸಂಗಡಿಗರನ್ನು ಬಿಡುಗಡೆ ಮಾಡಲಾಯಿತು. ಆ ತಕ್ಷಣವೇ ವಿ.ಎಚ್.ದೇಸಾಯಿ ಮೊದಲಾದ ಸಂಪಾದಕೀಯ ಮಂಡಳಿಯವರನ್ನೆಲ್ಲ ಕಲಬುರ್ಗಿ ಜೈಲಿನಲ್ಲಿ ಇಡಲಾಯ್ತು. ಜೈಲು ಮನೆ ಮಠಗಳೆನ್ನದೆ ಪತ್ರಿಕೆಗಳನ್ನು ಬರೆದು ಅಥವಾ ಪ್ರಕಟಿಸುವುದರ ಮೂಲಕ ಜನತೆಯಲ್ಲಿ ವಿಮೋಚನಾ ಹೋರಾಟದ ಕೆಚ್ಚನ್ನು ತುಂಬುತ್ತಿದ್ದರು. "ದಿ ಡೆಮಾಕ್ರಾಟಿ ಪತ್ರಿಕೆ" ನಾಶವಾಗದೆ ಮುಂದುವರೆಯಿತು. ಬೂದಿ ಮುಚ್ಚಿದ ಕೆಂಡದಂತೆ ಈ ಪತ್ರಿಕೆ ಕೆಲಸ ಮಾಡಿತು. ಹೀಗಾಗಿ ತನ್ನದೇ ಸಾರ್ವಭೌಮತ್ವ ಅಧಿಕಾರ ಎಂದು ನಂಬಿದ ನಿಜಾಂನ ಮಾತು ಹುಸಿಯಾಯಿತು. ಅತ್ಯುತ್ತಮವಾದ ಕ್ರಾಂತಿಕಾರಕ ವಿಚಾರಗಳೊಂದಿಗೆ "ದಿ ಡೆಮೊಕ್ರಾಟ್ ಪತ್ರಿಕೆ" ನಿಜಾಂನ ದರ್ಪವನ್ನು ಖಂಡಿಸಿ ಲೇಖನ ಬರೆದು ಪ್ರಕಟಿಸುತ್ತಿತ್ತು. ಆಗ ಸ್ವಾತಂತ್ರ್ಯ ಭಾರತದ ಪ್ರಥಮ ಗೃಹಮಂತ್ರಿ, ಭಾರತದ ಉಕ್ಕಿನ ಮನುಷ್ಯನೆಂದು ಖ್ಯಾತಿಗಳಿಸಿರುವ ಸರದಾರ್ ವಲ್ಲಭಬಾಯಿ ಪಟೇಲರ ಮಾರ್ಗದರ್ಶನದಲ್ಲಿ ಸೈನ್ಯ ಕಾರ್ಯಾಚರಣೆ ಆರಂಭಗೊಂಡಿತು. ಕೊನೆಗೆ ನಿಜಾಂ ಶರಣಾದ. ಈ ಪ್ರಕ್ರಿಯೆಯಲ್ಲಿ ಪತ್ರಿಕೆ ಮಾಡಿದ ಕೆಲಸ ಬಹುಮಹತ್ವದ್ದಾಗಿ ಕಾಣುತ್ತದೆ.

## ೪.೨. ಇಮರೋಜ್ ಉರ್ದುಪತ್ರಿಕೆ

ಈ ಪತ್ರಿಕಾ ಮಾಧ್ಯಮದ ಮೂಲಕ ಹೊಸ ಚಳುವಳಿಯನ್ನೆ ಹುಟ್ಟು ಹಾಕಿದ ಪ್ರಕಾಶಕರು ಕನ್ನಡದಲ್ಲಿ ಅಲ್ಲದೆ ಹಿಂದಿ ಮತ್ತು ಉರ್ದು ಭಾಷೆಯಲ್ಲೂ ವಿಚಾರಗಳನ್ನು ಪ್ರಕಟಿಸಿದರು. ಒಂದೂಗಳಿಗೆ ಕನ್ನಡ ಭಾಷಾ ಮಾಧ್ಯಮದ ಮೂಲಕ ಪತ್ರಿಕೆಗಳನ್ನು ಕೊಡುವುದರಿಂದ ಹಾಗೂ

ಮುಸ್ಲಿಂರಿಗೆ ಅವರದೇ ಉರ್ದು ಭಾಷೆಯ ಮೂಲಕ ಪ್ರತಿ ಮನೆಗೂ ನಿಜಾಂನ ಸರ್ವಾಧಿಕಾರ ಹಾಗೂ ವಿಮೋಚನೆಯ ಹೋರಾಟದ ಯೋಜನೆಗಳನ್ನೂ ಸೂಚಿಸ ತೊಡಗಿದರು. ನಿಜಾಂನ ಆಳ್ವಿಕೆ ವಿರುದ್ಧ ಪ್ರತಿಭಟಿಸಿದ್ದು, ಕೋಮು ಸೌಹಾರ್ದತಾ ಭಾವನೆಯನ್ನು ವೃದ್ಧಿಪಡಿಸಿದ್ದು, ಇತಿಹಾಸ ಮರೆಯಲಿಕ್ಕೆ ಸಾಧ್ಯವಾಗದ ಮಾತು. ಹೈದರಾಬಾದ್ ಕರ್ನಾಟಕದ ವಿಮೋಚನೆಗಾಗಿ ಗಾಂಧಿ ಟೋಪಿ ಧರಿಸಿದ ಮುಸ್ಲಿಂರನ್ನು ನಿಜಾಂ ಪೋಲಿಸರು ಗುಂಡಿಕ್ಕಿ ಕೊಂದರು. ಇಂತಹ ಬರ್ಬರ ಕೃತ್ಯವನ್ನು ಸಂಪೂರ್ಣವಾಗಿ ಪತ್ರಿಕೆಗಳು ಎತ್ತಿ ಹಿಡಿದವು. ಅವುಗಳಲ್ಲಿ ಉರ್ದು ಪತ್ರಿಕೆ ಇಮರೋಜ್ ಕೂಡ ಒಂದು.

ಫ್ರಾನ್ಸಿನ ಸರ್ವಧಿಕಾರಿಯಾಗಿ ಇಡೀ ಭೂಮಂಡಲವನ್ನು ತನ್ನ ವಶದಲ್ಲಿರಿಸಿಕೊಳ್ಳಬೇಕೆಂಬ ಮಹತ್ವದ ಆಕಾಂಕ್ಷೆಯಲ್ಲಿ ಮುನ್ನುಗುತ್ತಿದ್ದಂತಹ ನೆಪೋಲಿಯನ್ ಬೋನಾಪಾರ್ಟೆ "ನಾನು ಸಾವಿರ ಬಂದೂಕುಗಳಿಗಿಂತಲೂ ಒಂದು ಪತ್ರಿಕೆಗೆ ಹೆದರುತ್ತೇನೆ"[೪] ಎಂಬ ಮಾತು ಎಷ್ಟೊಂದು ಅರ್ಥಗರ್ಭಿತ ಎಂಬುವುದು ಈ ಹೋರಾಟದಲ್ಲಿ ನಿಜಾಮ್ ಸರ್ವಾಧಿಕಾರಿಗಳು ಪತ್ರಿಕೆಯಿಂದ ಅನುಭವಿಸಿದ ತೊಂದರೆಗಳಲ್ಲಿ ಅನಾವರಣಗೊಳ್ಳುತ್ತವೆ. ನಿಜಾಂನು "ಇಮರೋಜ" ಪತ್ರಿಕೆಯು ನಿರ್ಭಿಡೆ ಲೇಖನಗಳಿಗೆ ಹಾಗೂ ಕ್ರಾಂತಿಕಾರಕ ಸಂಪಾದಕೀಯ ಲೇಖನಗಳಿಗೆ ಪ್ರಸಿದ್ಧಿ ಪಡೆದಿತ್ತು. ಶೋಯಬುಲ್ಲಾಖಾನ್ ಹೈದರಾಬಾದ್ ಕರ್ನಾಟಕದ ಪ್ರಭಾವೀ ಪತ್ರಕರ್ತರಾಗಿದ್ದರು. ಇಮರೋಜ್ ಪತ್ರಿಕೆಯ ಸಂಪಾದಕರಾದರು. ಕಾಸಿಂ ರಜ್ವಿ ಆಡಳಿತದ ಕುತಂತ್ರಗಳ ಕುರಿತು ಟೀಕೆಯೊಂದಿಗೆ ಬರೆಯ ತೊಡಗಿದನು. ಶೋಯಬುಲ್ಲಾಖಾನ್‌ನ ಪತ್ರಿಕೆ ಎಂದರೆ ವಿರೋಧಿಗಳಿಗೆ ನಡುಕು ಹುಟ್ಟಿಸುತ್ತಿತ್ತು. ಯಾವ ಸಂದರ್ಭದಲ್ಲಿ ಹೇಗೆ ಬರೆಯಬೇಕೆಂಬ ಹಾಗೂ ಹೋರಾಟಗಾರರಿಗೆ ಸ್ಫೂರ್ತಿ ತುಂಬುವ ಬುದ್ಧಿಂವತಿಕೆ ಆತನಲ್ಲಿತ್ತು. ಸಂಪಾದಕರು ಸಂಪಾದಕೀಯ ಬರೆಯುವುದರಲ್ಲಿ ಎತ್ತಿದ ಕೈ. ಶೋಯಬುಲ್ಲಾಖಾನ್ ಸಂಪಾದಕೀಯ ಓದಿದರೆ ನರಸತ್ತ ಮನುಷ್ಯನಿಗೆ ಸ್ಫೂರ್ತಿ ಬರುತ್ತಿತ್ತು ಎಂದು ಕೆಲವರು ಹೇಳಿರುವುದು ಗಮನಾರ್ಹ. ಅಷ್ಟೊಂದು ಪರಿಣಾಮಕಾರಿಯಾದ ಭಾಷೆ ವಿಷಯವನ್ನು ತುಂಬಾ ಅರ್ಥಪೂರ್ಣ ಮಾಡುತ್ತಿತ್ತು. ಮುಸ್ಲಿಂರು ತುಂಬಾ ಆತ್ಮೀಯವಾದ ರೀತಿಯಲ್ಲಿ ಈ ಪತ್ರಿಕೆಯನ್ನು ಕಾಣುತ್ತಿದ್ದರೆ, ಉರ್ದು ತಿಳಿದಿದ್ದ ಹಿಂದೂಗಳು ಅದನ್ನು ಹೆಚ್ಚು ಹೆಚ್ಚಾಗಿ ಓದುತ್ತಿದ್ದರು. ಹೀಗಾಗಿ ಉರ್ದು ಪತ್ರಿಕೆಯಾದ ಇಮರೋಜ್ ಜನಪ್ರಿಯ ಪತ್ರಿಕೆಯಾಗಿ ಹೊರಬಂದಿತು. ಹಿಂದೂ-ಮುಸ್ಲಿಂ ವಿರೋಧಿಯಾಗಿರದೇ ನಿಷ್ಪಕ್ಷಪಾತವಾದ ನ್ಯಾಯಯುತವಾದ ಬೇಡಿಕೆಗಳನ್ನು ಪರಿಣಾಮಕಾರಿಯಾಗುವಂತೆ ಬರೆಯುತ್ತಿದ್ದನು. ಹೀಗೆ ಅದು ಎಲ್ಲರಲ್ಲೂ ತುಂಬ ಪ್ರೀತಿಯ ಪತ್ರಿಕೆ ಎಂಬ ಹಿರಿಮೆಗೆ ಪಾತ್ರವಾಯಿತು.

ಶೋಯಬುಲ್ಲಾಖಾನ್‌ರ "ಇಮರೋಜ್" ಪತ್ರಿಕೆಯ ಕಚೇರಿ ಹೈದರಾಬಾದ್‌ನ ಬಾಲಲಿಂಗಪಲ್ಲಿಯಲ್ಲಿತ್ತು. ಮುಸ್ಲಿಂ ನೀತಿಯನ್ನು ವಿರೋಧಿಸಿ ಬರೆಯುವ ಪತ್ರಿಕೆ ಇದಾಗಿರಲಿಲ್ಲ. ಮುಸ್ಲಿಂ ಸಂಪಾದಕನೆಂದು, ಮುಸ್ಲಿಂ ದೊರೆಯ ಪರವಾಗಿ ಎಂದೂ ಬರೆಯುವ ಇರಾದೆಯನ್ನು ಇಟ್ಟುಕೊಳ್ಳದೆ ನ್ಯಾಯದ ಪರವಾಗಿ, ಪ್ರಜಾಪ್ರಭುತ್ವದ ನಿಲುವನ್ನು ಸಮರ್ಥಿಸುವ ನಿಲುವನ್ನು ಹೊಂದಿದ ಪತ್ರಿಕೆಯದಾಗಿತ್ತು. ಪತ್ರಿಕಾ ಧರ್ಮವನ್ನು ಗಾಳಿಗೆ ತೂರುವ ಅಥವಾ ಮತಾಂಧತೆಗೆ ಪತ್ರಿಕಾ ಸ್ವಾತಂತ್ರವನ್ನು ಮಾರಿಕೊಳ್ಳುವಂತಹ ತೆವಲು ಶೋಯಬುಲ್ಲಾ ಖಾನ್‌ಗೆ ಇರಲಿಲ್ಲ. ಶೋಯಬುಲ್ಲಾಖಾನ್ ನಿಜಾಂನ ನೀತಿಯನ್ನು ಸಂಪೂರ್ಣವಾಗಿ ಖಂಡಿಸಿದನು. ೧೯೧೯ರಲ್ಲಿ ಶೋಯಬುಲ್ಲಾಖಾನ್‌ನ ತಂದೆ ನಿಜಾಮ್ ಪೋಲೀಸ್ ಇಲಾಖೆಯ ನೌಕರನಾಗಿದ್ದನು. ಪ್ರಾರಂಭದಲ್ಲಿ ಪತ್ರಕರ್ತನಾಗಿದ್ದ ಶೋಯಬುಲ್ಲಾಖಾನ್ ಅವರು ನಿಜಾಂನ ವಿರೋಧಿ ನೀತಿ ಕಂಡು, ಅವುಗಳನ್ನೆಲ್ಲ ಅಂದಿನ "ತಾಜ್" ಎಂಬ ಪತ್ರಿಕೆಯ ಮೂಲಕ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದನು. ಆಗ ತಾಜ್ ಪತ್ರಿಕೆಯ ಜೀವಾಳ ಈ ವ್ಯಕ್ತಿಯಾಗಿದ್ದ. ಪತ್ರಿಕೋದ್ಯಮದ ಅನೇಕ ಅನುಭವಗಳನ್ನು ಪಡೆದುಕೊಂಡನು. ಈ ಬೆಳವಣಿಗೆಯನ್ನು ಕಾಸಿಂ ರಜ್ವಿ ಸಹಿಸಲಾರದಾದ.

ಮುಂದೊಂದು ದಿನ ಈ ಪತ್ರಿಕೆ ನನಗೆ ನುಂಗಲಾರದ ತುತ್ತು ಆಗುತ್ತದೆ ಎಂದರಿತು, ನಿಜಾಂನು ಆ ಪತ್ರಿಕೆ ಪ್ರಕಟಿಸುವುದನ್ನು ನಿಷೇಧಿಸಿದನು. ಈ ನಿಷೇಧಕ್ಕೊಳಗಾದ ಮೇಲೆ "ರಿಯಾಕ್ " ಎಂಬ ಪತ್ರಿಕೆಯನ್ನು ಸ್ವಾತಂತ್ರ್ಯ ಹೋರಾಟಗಾರರಾದ ಎಂ.ನರಸಿಂಗರಾವ್ ಪ್ರಾರಂಭಿಸಿದರು. ಆಗ ನಿಜಾಂ ಸರಕಾರ ಇದನ್ನು ಸಹ ನಿರ್ಬಂಧಕ್ಕೊಳಪಡಿಸಿ ಸ್ಥಗಿತಗೊಳಿಸಿದ. ಆಗ ಅನಿವಾರ್ಯವಾಗಿ "ಇಮರೋಜ್" ಪತ್ರಿಕೆಯನ್ನು ಪುನಃ ಪ್ರಾರಂಭಿಸಬೇಕಾಯಿತು. ಹೇಗೋ ಏನೋ ಮಾಡಿ ಒಂದು ವರ್ಷ ಕಾಲ ನಿರಂತರ ಈ ಪತ್ರಿಕೆ ಪ್ರಕಟಿಸಿದ್ದನ್ನು ನೋಡಿದರೆ, ಅವರ ಶಕ್ತಿಯನ್ನು ನಾವು ಅರಿಯ ಬಹುದು. ಅಂಧಕಾರ ಆಸೆಯಿಂದ ತುಂಬಿದ್ದ ನಿಜಾಂ ಮತ್ತು ಕಾಸಿಂ ರಜವಿಯ ವಿರುದ್ಧ ಈ ಪತ್ರಿಕೆ ಸೆಡ್ಡು ಹೊಡೆದು ಹೋರಾಟ ಮಾಡಿತು.

"ಕಾಸಿಂ ರಜ್ವಿ, ಶೋಯಬುಲ್ಲಾಖಾನನನ್ನು ನೋಡಿ ಅಸೂಯೆಪಟ್ಟು ಜೀವ ಬೇದರಿಕೆ ಹಾಕಿ ಬಿ.ರಾಮಕೃಷ್ಣರಾವ್ ಮೂಲಕ ಶೋಯಬುಲ್ಲಾಖಾನ್‌ಗೆ ಎಚ್ಚರಿಕೆ ನೀಡಿದಾಗ "ಸತ್ಯಕ್ಕಾಗಿ ಸಾಯುವುದಾದರೆ ಅದು ನನಗೆ ಹೆಮ್ಮೆಯ ವಿಷಯ" ಎಂದು ಹೇಳಿದನು".[೫] ಈ ಮಾತು ಸತ್ಯದ ಪರವಾಗಿ ಪತ್ರಿಕಾಕರ್ತನು ಆಡಿದ್ದಿದು ಆಗಿದೆ. ಕಾಸಿಂ ರಜ್ವಿ ಹೈದರಬಾದ್‌ನ ಝುಮರ ಮಹಲಿನಲ್ಲಿ ಸಾರ್ವಜನಿಕ ಸಭೆಯಲ್ಲಿ ಪತ್ರಕರ್ತರನ್ನು ಉದ್ದೇಶಿಸಿ ಮಾತನಾಡುತ್ತಾ, ರಜಾಕಾರರ ವಿರುದ್ಧ ಬರೆಯುವ ಪತ್ರಕರ್ತರ ಕೈಗಳನ್ನು ಕತ್ತರಿಸಿ ಹಾಕುವುದಾಗಿ ಆಕ್ರೋಶದಿಂದ ಹೇಳಿದ. ಈ ಎಚ್ಚರಿಕೆ

ಪರೋಕ್ಷವಾಗಿ ಶೋಯಬುಲ್ಲಾಖಾನ್‌ಗೆ ಕೊಡಲಾಗಿತ್ತು ಎಂದು ಕೆಲವರು ಹೇಳಿದರು. ಆಗ ಶೋಯಬುಲ್ಲಾಖಾನ್‌ಗೆ ಶಿಕ್ಷೆ ವಿಧಿಸಲು ರಜಾಕಾರರು ಹೊಂಚುಹಾಕಿದರು. ಕೊನೆಗೆ "ಇಮರೋಜ್" ಪತ್ರಿಕೆಯ ಕಛೇರಿಯಿಂದ ಹೊರ ಬರುವಾಗಲೇ ೨೧ ಅಗಸ್ಟ್ ೧೯೪೮ರಂದು ಶೋಯಬುಲ್ಲಾಖಾನ್‌ನನ್ನು ರಜಾಕಾರರು ಬೆನ್ನಟ್ಟಿ ಅವರ ಮೇಲೆ ಹಲ್ಲೆ ಮಾಡಿದರು. ರಜಾಕಾರರು ಅವರ ಕೈಗಳನ್ನು ಕತ್ತರಿಸಿ ಹಾಕಿದರು. ಅಷ್ಟು ಹಿಂಸೆ ಮಾಡಿದ್ದಲ್ಲದೇ ಚಾಕುವಿನಿಂದ ಇಡೀ ದೇಹವನ್ನೇ ಹಿಂಸೆಗೊಳಪಡಿಸಿದರು. ಆಸ್ಪತ್ರೆಗೆ ಸೇರಿಸಿದರೂ ಬದುಕಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕೊನೆಗೆ ೨೨ ಅಗಸ್ಟ್ ೧೯೪೮ರಂದು ಕೊನೆಯುಸಿರೆಳೆದರು. ದೇಶಭಕ್ತ, ಶ್ರೇಷ್ಟ ಪರ್ತಕರ್ತ, ಆದರ್ಶವಾದಿ, ಹೋರಾಟಗಾರ, ಸಂಪಾದಕ, ಜಾತ್ಯತೀತ ವರ್ಣಮಯ ವ್ಯಕಿತ್ವ ಶೋಯಬುಲ್ಲಾಖಾನ್ ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗಮಾಡಿದರು. ಆದರೆ ಖಾನ್ ಹೊರತಂದಂತಹ "ಇಮರೋಜ್ " ಪತ್ರಿಕೆ ವಿಮೋಚನಾ ಹೋರಾಟದಲ್ಲಿ ಮಾಡಿದ ಸಾಧನೆ ಬಹುದೊಡ್ಡದು. ಸ್ವಾಮಿ ರಮಾನಂದ ತೀರ್ಥರು ಮರಾಠವಾಡ ವಿದ್ಯಾಪೀಠ ನಾಂಗೇಡದಲ್ಲಿ 'ಶೋಯಬುಲ್ಲಾಖಾನ್ ಸ್ಮರಣಾರ್ಥವಾಗಿ ಶೋಯಾಬುಲ್ಲಾಖಾನ್ ಸಭಾಗೃಹ'ವನ್ನು ನಿರ್ಮಿಸಿ ಇಂದಿಗೂ ನೆನಪು ಉಳಿಯುವಂತೆ ಮಾಡಿದ್ದಾರೆ.

ಅಪ್ಪಟ ದೇಶ ಪ್ರೇಮದ ಶೋಯಬಲ್ಲಾಖಾನರು ಪತ್ರಿಕಾರಂಗದ ಜೊತೆಗೆ ಸೋದರತ್ವ ಬೆಳೆಸಿದ ವ್ಯಕ್ತಿ ಆಗಿದ್ದರು. ಅವರ ದೇಶ ಪ್ರೇಮವನ್ನು ನೋಡಿ, ನಲವಡಿ ಶ್ರೀಕಂಠಶಾಸ್ತ್ರಿ ಅವರು ತಮ್ಮ ಲಾವಣಿಯ ಸಾಲುಗಳಲ್ಲಿ ಹೀಗೆ ಚಿತ್ರಿಸಿದ್ದಾರೆ.

> "ನೀತಿವಂತ ನಿರ್ಮಲ ಮನಸಿನ ಇಂಮ್ರೊಜ ಪತ್ರಸಂಪಾದಕರು
> ಖ್ಯಾತಿವಂತ ಶೋಬುಲ್ಲಾಖಾನರು ಮುಸಲೀಮ್ ಧರ್ಮಪ್ರಚಾರಕರು
> ಪಾತಕತನವಿದು ಪ್ರಜರ ಕೊಲ್ಲುವುದು ಬೇಡವೆಂದು ನಿಜಸಾರಿದರು
> ಘಾತಿಸುತವರನು ಕೊಲೆ ಮಾಡಿಸಿದರು ರಜವೀರಾಜ್ಯ ಸ್ಥಾಪಕರು"[೬]

ಈ ರೀತಿಯಾಗಿ ಕಾಸಿಂ ರಜೀವಿ ಶೋಬುಲ್ಲಾಖಾನರನ್ನು ಕೊಲ್ಲಲು ತನ್ನ ಸೈನ್ಯಕ್ಕೆ ಆಜ್ಞೆ ಹೊರಡಿಸಿ ಅವರನ್ನು ಕೊಲೆ ಮಾಡಿಸಿದನು ಎಂಬ ಉಲ್ಲೇಖ ಈ ಲಾವಣಿಯಿಂದ ಸ್ಪಷ್ಟಪಡಿಸಿಕೊಳ್ಳಬಹುದು.

## ೪.೩. ಸಂಯುಕ್ತ ಕರ್ನಾಟಕ ಪತ್ರಿಕೆ

ಭಾರತಕ್ಕೆ ಸ್ವಾತಂತ್ರ್ಯ ಬಂದು ಎಲ್ಲರೂ ಹರ್ಷೋದ್ಗಾರದಲ್ಲಿ ಮುಳುಗಿದರು. ಅದನ್ನೆಲ್ಲ ಕಣ್ಣಾರೆ ಕಂಡ ಹೈದರಾಬಾದ್ ಜನ ಮೂಕರಾದರು. ಅದರಲ್ಲಿಯೂ ಕರ್ನಾಟಕದ ಜನ ತಮ್ಮ ನಾಡಿನ ಕೆಲವು ಪ್ರದೇಶಗಳು ಸ್ವಾತಂತ್ರ್ಯ ಭಾರತಕ್ಕೆ ಸೇರಿದ್ದನ್ನು ಕಂಡು ಸ್ವಾಭಿಮಾನಿ ಕನ್ನಡಿಗರು ಮೂಕ ವಿಸ್ಮಿತರಾದರು. ನಿಜಾಂ ಸಂಸ್ಥಾನವನ್ನು ನಿಜಾಂನು ಸ್ವತಂತ್ರ ಸಂಸ್ಥಾನವೆಂದು ಘೋಷಿಸಿದ್ದನು.

ಹೀಗಾಗಿ ಅದರ ಹಿಡಿತ ತಪ್ಪಿಸಿಕೊಳ್ಳಲು ಒಂದು ವರ್ಷ ಕಾಯಬೇಕಾದದ್ದು ಈ ಭಾಗದ ಇತಿಹಾಸದ ದುರಂತ ಚರಿತ್ರೆಯಾಗಿದೆ.

ದೇಶ ಸ್ವಾತಂತ್ರ್ಯಹಬ್ಬದ ಆಚರಣೆಯ ಆನಂದದ ಕ್ಷಣಗಳ ಜೊತೆಗೆ ನಿಜಾಂ ಸಂಸ್ಥಾನ ಸ್ವಾತಂತ್ರ್ಯ ಭಾರತಕ್ಕೆ ಸೇರದೆ ಅದು ಅನುಭವಿಸುತ್ತಿದಂತಹ ಸ್ಥಿತಿಯ ಬಗ್ಗೆ ಇಲ್ಲಿನ ಜನರನ್ನು ಹುರಿದುಂಬಿಸುವ ಕೆಲಸವನ್ನು ಸಂಯುಕ್ತ ಕರ್ನಾಟಕ ಪತ್ರಿಕೆ ಮಾಡಿತು. ಭಾರತ ಸ್ವಾತಂತ್ರ್ಯಗೊಳ್ಳದ ಪೂರ್ವದಲ್ಲಿ ಬ್ರಿಟಿಷರ ನೀತಿಗಳನ್ನು ಬಹಿರಂಗವಾಗಿ ಬರೆದು, ಎಲ್ಲಾ ಜನತೆಗೆ ಸುದ್ದಿ ತಿಳಿಸಿತು. ಆದರೆ ಹಾಗೇ ನಿಜಾಂನ ದಬ್ಬಾಳಿಕೆ, ಕ್ರೂರನೀತಿ, ಅರಾಜಕತೆ, ಲೂಟಿ ಮುಂತಾದವುಗಳೊಂದಿಗೆ ಮತ್ತೊಂದು ಪಾಕಿಸ್ತಾನ ಮಾಡಲು ಹೊರಟಿರುವ ಸತ್ಯ ಸಂಗತಿಯನ್ನು ಬಯಲಿಗೆ ಹಾಕಿತ್ತು. ಅಂದಿನ ದಿನಗಳಲ್ಲಿ ಈ ಪ್ರಾಂತ್ಯವನ್ನು ತಲ್ಲಣಗೊಳಿಸಿದ ರಜಾಕಾರರ ದೌರ್ಜನ್ಯದ ಪ್ರತಿಯೊಂದು ಸನ್ನಿವೇಶವನ್ನು ಹಾಗೂ ಅದರ ಹಾನಿಕಾರಕ ವರ್ತನೆಯನ್ನು ಪತ್ರಿಕೆಯ ಮುಖಪುಟದಲ್ಲಿಯೇ ಮುದ್ರಿಸಿ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದಂತಹ ಜನರನ್ನು ಹೆಚ್ಚು ಹೆಚ್ಚಾಗಿ ಪ್ರೇರೇಪಿಸುವಲ್ಲಿ ಮುಂದಾಯಿತು. ವಿಮೋಚನಾ ಹೋರಾಟದಲ್ಲಿ ನಿಜಾಂನ ಕುತಂತ್ರ ನೀತಿಗಳನ್ನು, ಸುದ್ದಿಗಳನ್ನು ಸಾಮಾನ್ಯ ಜನರಿಗೆ ಮುಟ್ಟುವಂತೆ ಸರಳವಾಗಿ, ಅಷ್ಟೇ ಪ್ರಭಾವಯುತವಾಗಿ ಸಂಯುಕ್ತ ಕರ್ನಾಟಕ ಪ್ರಕಟಿಸಿತು. ಸಂಯುಕ್ತ ಕರ್ನಾಟಕ ಪತ್ರಿಕೆಯ ಸಂಪಾದಕೀಯಗಳು ಜನರಲ್ಲಿ ಜಾಗೃತಿ ಉಂಟುಮಾಡಿದವು. ಸಂದರ್ಭಕ್ಕೆ ಅನುಸಾರವಾಗಿ ವಿಶೇಷ ಲೇಖನ ಬರೆಯುವ ಮೂಲಕ ಜನರ ಹೋರಾಟಕ್ಕೆ ಬಲ ನೀಡಿತು. ಜನರ ಮುಕ್ತ ಅಭಿಪ್ರಾಯಗಳನ್ನು ಪ್ರಕಟಿಸಿತು. ಸ್ವಾತಂತ್ರ್ಯಾ ನಂತರ ಇಂದಿಗೂ ಆ ಕೆಲಸವನ್ನು ಪತ್ರಿಕೆ ಮಾಡುತ್ತಿರುವುದನ್ನು ಕಾಣಬಹುದು.

ಅಲ್ಲದೆ ಸಂಯುಕ್ತ ಕರ್ನಾಟಕ ಪತ್ರಿಕೆ ತನ್ನ ಅಚಲವಾದ ನಿಲುವಿನ ಸುದ್ದಿ ಪ್ರಕಟಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿತು. ಮುಖ್ಯವೆಂದರೆ ಕರ್ನಾಟಕದಲ್ಲಿ ವೀರ ಸನ್ಯಾಸಿಯಾಗಿ ಹೋರಾಟ ಗಾರರಾದ, ಸ್ವಾಮಿ ರಮಾನಂದ ತೀರ್ಥರು ಹೈದರಾಬಾದ್‌ನಲ್ಲಿ ನಡೆದ 'ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ಸ್' ನ ಪ್ರಥಮ ಅಧಿವೇಶನದಲ್ಲಿ ಅಧ್ಯಕ್ಷೀಯ ಸ್ಥಾನವನ್ನು ವಹಿಸಿಕೊಂಡರು. ನಿಜಾಂ ಸಂಸ್ಥಾನದಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸನ್ನು ೧೯೩೮ರ ಜೂನ್ ೨೯ರಲ್ಲಿ ಸ್ಥಾಪಿಸಲಾಯಿತು. ರಮಾನಂದತೀರ್ಥರು ಅಧ್ಯಕ್ಷೀಯ ಭಾಷಣದಲ್ಲಿ ಹೀಗೆ ಹೇಳುತ್ತಾರೆ. "ಹೈದರಾಬಾದ್ ಹಿಂದೂಸ್ತಾನದಲ್ಲಿ ಸೇರಬೇಕು ಇಲ್ಲದಿದ್ದರೆ ಸತ್ಯಾಗ್ರಹ" ಎಂದು ಘೋಷಿಸಿದರು. ಅಲ್ಲಿ ಸೇರಿದ ೬೦ ಸಾವಿರ ಜನರ ಮನದಲ್ಲಿ ಅಂದು ಮೂಡಿಸಿದ ಬೀಜ ಎಲ್ಲೆಲ್ಲೂ ಮೊಳಕೆಯೊಡೆಯಿತು. ತಮ್ಮ ಜನ್ಮಸಿದ್ಧ ಹಕ್ಕನ್ನು ಸಂಪಾದಿಸಲು ಪ್ರಜೆಗಳು ಕಂಕಣ ಬದ್ಧರು ಎಂದು ಆ ಜನಸ್ತೋಮದ ಮುಂದೆ ಮಾಡಿದ ಭಾಷಣದಿಂದ ಅನೇಕ ಜನರು ಪ್ರಭಾವಿತರಾದರು. ಆದರೆ ಈ ಹೇಳಿಕೆ ಸಮಾರಂಭಕ್ಕೆ

ಬರದ ಅಸಂಖ್ಯಾತ ಜನರಿಗೆ ಗೊತ್ತಾಗಲಿಲ್ಲ. ಅದನ್ನು ಮೊಟ್ಟಮೊದಲ ಬಾರಿಗೆ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಇದರಿಂದ ಲಕ್ಷಾನುಗಟ್ಟಲೆ ಜನರಲ್ಲಿ ಈ ಮಾತು ಚರ್ಚೆಯ ವಿಷಯವಾಯಿತು. ಎಲ್ಲರೂ ಕೂಡಿ ವಿಮೋಚನಾ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಕೆಲಸ ಮಾಡುವಲ್ಲಿ ಈ ಪತ್ರಿಕೆಯ ಪಾತ್ರ ತುಂಬಾ ಹಿರಿದಾಗಿದ್ದಿತು.

ಪತ್ರಿಕೆಯ ಮೂಲಕ ಈ ವಿಷಯ ತಿಳಿದ ಬೀದರ್, ಕಲಬುರ್ಗಿ, ಹಾಗೂ ರಾಯಚೂರು ಜಿಲ್ಲೆಯ ಜನರೆಲ್ಲ 'ನಿಜಾಂ ಸರಕಾರ ಹಿಂದೂಸ್ತಾನ ಒಕ್ಕೂಟ ಸೇರಲಿ' ಎಂದು ಒತ್ತಾಯಿಸಿದರು. ಒಕ್ಕೂಟ ದಿನ ಆಚರಿಸಿ, ಸತ್ಯಾಗ್ರಹ ಆರಂಭಿಸಿದ್ದನ್ನು ಎಲ್ಲಾ ಕಡೆ ಪ್ರಚಾರ ಮಾಡಿ, ಅವುಗಳ ಸುದ್ದಿ ಪ್ರಕಟಿಸಿ ಜನರಿಗೆ ಮುಟ್ಟುವ ಕೆಲಸವನ್ನು ಸಂಯುಕ್ತ ಕರ್ನಾಟಕ ಮಾಡಿತು.

೧೪-೮-೧೯೪೭ರ ಸಂಚಿಕೆಯಲ್ಲಿ "ಭಾರತ ಸ್ವಾತಂತ್ರ್ಯ ಆಗುವ ಪೂರ್ವದಲ್ಲಿ ಕಾಂಗ್ರಸ್ಸಿನ ನಾಯಕರೆಲ್ಲರೂ ಸೇರಿ ಹೈದ್ರಾಬಾದ್ ಸಂಸ್ಥಾನ ಭಾರತ ಒಕ್ಕೂಟಕ್ಕೆ ಸೇರಬೇಕು. ಹೈದರಾಬಾದ್ ಸಂಸ್ಥಾನ ಪ್ರತ್ಯೇಕವಾಗುವುದಕ್ಕೆ ಬಿಡಲಾರೆವು. ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಲು ಮುಂದಾದ ನಾವು ಸ್ವತಂತ್ರರಾಗುವವರೆಗೂ ಯಾವ ಹೋರಾಟಕ್ಕೂ ಸಿದ್ಧರಿದ್ದೇವೆ. ಸರಕಾರದ ಕಣ್ಣು ತೆರೆಯಲಿ ಎಂದು ಘೋಷಣೆ ಕೂಗಿ ಪ್ರತಿಜ್ಞೆ ಮಾಡಿದರು. ಸಂಯುಕ್ತ ಕರ್ನಾಟಕ ಪತ್ರಿಕೆ ಈ ವಿಷಯ ಮುಖಪುಟದಲ್ಲಿ ಪ್ರಕಟಿಸಿತು. ಅಂದಿನ ದಿನಗಳಲ್ಲಿ ಅದು ಜನರನ್ನು ಸ್ವಾತಂತ್ರ್ಯದೆಡೆಗೆ ಕೊಂಡೊಯ್ಯುವ ಮುಖ್ಯ ವಾಹಿನಿಯಾಗಿತ್ತೆನ್ನಬಹುದು.

೧೯-೮-೪೭ರ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ವರದಿಯಂತೆ, ಭಾರತ ರಾಷ್ಟ್ರಧ್ವಜವನ್ನು ಸ್ವಾತಂತ್ರ್ಯ ಹೋರಾಟಗಾರರು ಹಾರಿಸಿದ್ದನ್ನು, ಕೆಳಗಿಳಿಸಿದ ನಿಜಾಂ ಪೊಲೀಸರ ಮನೆಯನ್ನು ಉದ್ಧಟತನವೆಂದು ಹೇಳಿ, ಸತ್ಯಾಗ್ರಹ ಮಾಡಲು ಅನೇಕರು ಮುಂದಾದರು. ಕೊಪ್ಪಳ, ಮಾನ್ವಿ, ಕುಷ್ಟಗಿ, ರಾಯಚೂರು ಹಾಗೂ ಕಲಬುರ್ಗಿ ಭಾಗಗಳಲ್ಲಿ ವಿಮೋಚನಾ ಹೋರಾಟಗಾರರು ಈ ಘಟನೆಯನ್ನು ತೀವ್ರವಾಗಿ ಖಂಡಿಸಿದರು. ನಿಜಾಂ ಪೊಲೀಸರು ಹೋರಾಟಗಾರರನ್ನು ಬಂಧಿಸಿ ಜೈಲಿನಲ್ಲಿ ಇರಿಸಿದರು. ಜಾತೀಯ ಸಂಘರ್ಷದ ಹೋರಾಟ ಹಾಗೂ ಕೋಮುಗಲಭೆಗೆ ಕಾರಣರೆಂದು ಸುಳ್ಳು ಆಪಾದನೆ ಮೇಲೆ ಅನೇಕರನ್ನು ಬಂಧಿಸಿದರು. ಇದನ್ನು ಸಹ ಸಂಯುಕ್ತ ಕರ್ನಾಟಕ ಪ್ರಕಟಿಸಿತು. ಇದನ್ನು ಕಂಡ ಹೈದರಾಬಾದ್ ಕರ್ನಾಟಕ ಕಾಂಗ್ರಸ್ ಕ್ರಿಯಾ ಸಮಿತಿ ಚಳುವಳಿಗಾರರು, "ತ್ಯಾಗ ಬಲಿದಾನಕ್ಕೆ ಸಿದ್ಧರಾಗಿರಿ" ಎಂದು ಯುವಕರಿಗೆ ಕರೆ ನೀಡಿದರು. ಈ ಸುದ್ದಿಯನ್ನು ೨೭-೮-೪೭ರಂದು ಮುಖ್ಯ ವಾಹಿನಿಯಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆ ವರದಿ ನೀಡಿತು. ಅಂದು ಸಾರಿಗೆ-ಅಂಚೆ ವ್ಯವಸ್ಥೆ ಇರಲಿಲ್ಲ. ಹೀಗಾಗಿ ಅಲ್ಲಲ್ಲಿ ನಡೆದ ಹೋರಾಟ ಯಾವ ತೆರನಾಗಿತ್ತು ಎಂಬುದನ್ನು ತಿಳಿಯ ಪಡಿಸಲು

ಸಾಕಷ್ಟು ಪ್ರಯತ್ನಿಸಿದ ಈ ಪತ್ರಿಕೆ "ಸತ್ಯಾಗ್ರಹದ ಸುದ್ದಿಗಳು" ಎಂಬ ಅಂಕಣದಡಿಯಲ್ಲಿ ಸುದ್ದಿಯನ್ನು ಪ್ರಕಟಿಸಿದರೆ, ಮತ್ತೊಂದೆಡೆಗೆ "ಹೈದರಾಬಾದ್‌ನ ಸುದ್ದಿಸಂಗ್ರಹ" ಎಂಬ ಅಂಕಣದ ಮೂಲಕ ಜನರಲ್ಲಿ ಪ್ರಜ್ಞೆ ಮೂಡಿಸುವ ಕೆಲಸವನ್ನು ಈ ಸಂಯುಕ್ತ ಕರ್ನಾಟಕ ಪತ್ರಿಕೆ ಮಾಡಿತು.

"ಸಂಯುಕ್ತ ಕರ್ನಾಟಕ" ನಿಜಾಂನ ನಿದ್ದೆಗೆಡಿಸಿತು. ಪೊಲೀಸರಂತೂ ಈ ಪತ್ರಿಕೆ ಹಿಡಿದುಕೊಂಡು ನಿಂತವರನ್ನು ಸಹ ಬಂಧಿಸಿ ಜೈಲಿನಲ್ಲಿ ಹಾಕಿದ್ದುಂಟು. ಈ ಪತ್ರಿಕೆ ಎಂದರೆ ನಿಜಾಂ ಸರಕಾರ ಹಾಗೂ ಪೊಲೀಸ್‌ರಿಗೆ ದಿಗಿಲು ಬಿದ್ದಿತು.[೬]

ನಿಜಾಂ ಸರಕಾರ ಜನತೆಗೆ ಮೋಸ ಮಾಡುತ್ತಿರುವುದು ಆ ಮೋಸಕ್ಕೆ ಬಲಿಯಾಗದಂತೆ ಇರಲು ಈ ಪತ್ರಿಕೆ ಕಟ್ಟೆಚ್ಚರ ಮೂಡಿಸಿತು. ನಿಜಾಂ ಸಂಧಾನ ಮಾಡುತ್ತೇನೆಂದು ಮಾಡಿದ ಅನೇಕ ನಾಟಕಗಳನ್ನು ಬಯಲಿಗೆಳೆದು, ಪತ್ರಿಕೆಯ ಮುಖ ಪುಟದಲ್ಲಿ ೮.೯.೪೭ರಂದು "ನಿಜಾಂಮರ ಹೊಸ ಅಸ್ತ್ರ" ಎಂದು ಪ್ರಕಟಿಸಿತು. ಪ್ರಕ್ಷುಬ್ಧ ಪ್ರದೇಶದಲ್ಲಿ ಗುಂಡಿಕ್ಕಲು ಅಧಿಕಾರಿಗಳಿಗೆ ಅಧಿಕಾರ ಎಂಬ ಹೊಸ ಸುಗ್ರೀವಾಜ್ಞೆಯು ಜನರ ಮೇಲೆ ಗದಾಪ್ರಹಾರ ಮಾಡಿತು. ಈ ವಿಚಾರವನ್ನು ಪ್ರಕಟಿಸಿ ಸ್ವಾತಂತ್ರ್ಯದ ಎಚ್ಚರಿಕೆ ಗಂಟೆ ಬಾರಿಸಿತು. ಇದರಿಂದ ಜನ ತೀವ್ರ ಹೋರಾಟಕ್ಕೆ ಮುಂದಾದರು. ನಿಜಾಂ ತನಗೆ ಬೇಕಾದಂತೆ ಅಧಿಕಾರ ಚಲಾಯಿಸಿ ಅನೇಕ ಲೂಟಿ, ದರೋಡೆ, ಅತ್ಯಾಚಾರ ಮಾಡಿಸಿದ್ದಲ್ಲದೆ ಗುಂಡಿನ ಮಳೆಯನ್ನು ಸುರಿಸಿದ. ಇದನ್ನು ಕಂಡ ಹೋರಾಟಗಾರರು ಹೌಹಾರಿ 'ಸಾಕು ನಿಜಾಂರೆ ಸಾಕಿನ್ನು, ಇಂತಹ ದರ್ಪದ ಅಧಿಕಾರ ಹೇರುವುದನ್ನು ನಿಲ್ಲಿಸಿ' ಎಂದರು. ಸ್ವಾತಂತ್ರ್ಯಕ್ಕಾಗಿ ತೆರಬೇಕಾದ ಬಲಿದಾನಕ್ಕಾಗಿ ತಾವು ಸಿದ್ಧರಾಗಿರಿ ಎಂದು ಘಂಟಾ ಘೋಷವಾಗಿ ಸಾರಿ ಜನರನ್ನು ಹೋರಾಟಕ್ಕೆ ಅಣಿಗೊಳಿಸ ತೊಡಗಿದರು.

ನಿಜಾಂ ಸರಕಾರ ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರ ಮಾಡಿ ಜನರನ್ನು ಹಿಂಸೆಗೆ ತಳ್ಳಿತು. ಹೈದರಾಬಾದ್ ಕರ್ನಾಟಕದ ಜನತೆ ಸತ್ಯಾಗ್ರಹದ ಮೂಲಕವೇ ತಮ್ಮ ಉತ್ತರ ನೀಡಿದರು. ಅಲ್ಲದೆ ಆರ್ಯ ಸಮಾಜದ ಹೋರಾಟಗಾರರು ಬಂದೂಕಿನಿಂದಲೇ ಉತ್ತರ ನೀಡಿದರು. ಇವರಿಂದ ತತ್ತರಿಸಿದ ನಿಜಾಂ ಮತ್ತು ರಜಾಕಾರರು ಸಂಪೂರ್ಣವಾಗಿ ಏನೂ ಮಾಡದಾದರು. ಹೈದರಾಬಾದ್ ಕಾಂಗ್ರೆಸ್ ಮೇಲೆ ನಿಜಾಂರ ಪ್ರತೀಕಾರ ಹೆಚ್ಚಾಗ ತೊಡಗಿತು. ನಿಜಾಂ ಎಷ್ಟೊಂದು ಹೀನನಾದ ಎಂಬುದನ್ನು ಅಂದಿನ ಪತ್ರಿಕೆಗಳಿಂದ ತಿಳಿಯುತ್ತದೆ. ದಿನಾಂಕ ೨೩.೧೧.೧೯೪೭ರ ಸಂಚಿಕೆಯಲ್ಲಿ ಹೈದರಾಬಾದ್ ರಾಜಕಾರಣ ಎತ್ತ ಸಾಗಿದೆ ಎಂಬು ಕಸಬೆ ಪಾಂಡುರಂಗರಾಯರು ಮಾಡಿದ ಭಾಷಣವನ್ನು ಸಂಯುಕ್ತ ಕರ್ನಾಟಕ ಪತ್ರಿಕೆ ಪ್ರಕಟಿಸಿತು. ದಿನಾಂಕ ೧೭.೧೨.೧೯೪೭ರಂದು ಮೂರ್ತಿಗಳ ಭಂಗ, ಅತ್ಯಾಚಾರ ಮಾಡಿದ್ದನ್ನು ಹಾಗೂ ರಜಾಕಾರರ ದುರಾಡಳಿತವನ್ನು ಈ ಪತ್ರಿಕೆ ಮುದ್ರಿಸಿತು. ಹೈದರಾಬಾದ್

ವಿಮೋಚನಾ ಹೋರಾಟದ ಪತ್ರಿಯೊಬ್ಬ ಹೋರಾಟಗಾರರ ಮಾತುಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಿ ಜನತೆಯು ಹೋರಾಟದಲ್ಲಿ ಭಾಗವಹಿಸುವಂತೆ ಮಾಡಿತು.

ಎಲ್ಲಾ ಭಾಗದ ಜನತೆಗೆ ಹೋರಾಟದ ಸುದ್ದಿ ಮುಟ್ಟಿಸುವ ಕಾರ್ಯ ಈ ಪತ್ರಿಕೆಯಿಂದ ನಡೆಯಿತು. ಹೈದರಾಬಾದ್ ವಿಮೋಚನಾ ಹೋರಾಟದ ನೇತೃತ್ವವಹಿಸಿದ ಪತ್ರಿಕೆ ಇಡೀ ಸಮೂಹದಲ್ಲಿ ಜಾಗೃತೆಯನ್ನು ತಂದಿತು. ದೇಶಪ್ರೇಮ, ಸ್ವಾತಂತ್ರ್ಯ, ತ್ಯಾಗ, ಬಲಿದಾನಗಳನ್ನು ಕುರಿತು ಮನಬಿಚ್ಚಿ ರೋಚಕ ಸಂಗತಿಗಳನ್ನು ಪ್ರಕಟಿಸಿ ಓದುಗರಿಗೆ ಇತಿಹಾಸದ ಕರಾಳ ದಿನಗಳನ್ನು ಬಿಚ್ಚಿಡುತ್ತದೆ. ಇಂಥ ಪತ್ರಿಕೆ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಅಗಾಧವಾದ ಕೆಲಸ ಮಾಡಿ ತನ್ನ ಜನಪ್ರಿಯತೆಯನ್ನು ಹಾಗೂ ಕರ್ತವ್ಯಪರತೆಯನ್ನು ಮೆರೆದಿದೆ.

ಜಾತಿಗಳ ಗಲಭೆ ಎದ್ದು ತಾಂಡವಾಡುತ್ತಿತ್ತು. ಕೆಲವು ಮುಸ್ಲಿಂರೂ ಹಿಂದೂ ಪರವಾಗಿದ್ದರು. ಅರಬರು ಇಲ್ಲಿ ಹೆಚ್ಚು ಜಾತಿ ಬೀಜ ಬಿತ್ತಿದ್ದನ್ನು ಕಂಡು ಪತ್ರಿಕೆ ಸುಮ್ಮನೆ ಕೂಡದೇ ಅವರ ನೀತಿಯನ್ನು ಖಂಡಿಸಿತು. ಬಾಲಕರ ಸಾವು, ಮಹಿಳೆಯರ ಶೀಲಹರಣ, ಹೋರಾಟಗಾರರ ಬಲಿದಾನಗಳ ವರದಿಗಳು ಪ್ರಕಟಗೊಂಡವು. ಇದರಿಂದ ಅರಬರ ವಿರುದ್ಧ ದಂಗೆ ಎದ್ದ ಜನ ಅವರನ್ನು ಸಂಪೂರ್ಣ ಓಡಿಸಿದರು.

ನಿಜಾಂ ಸರಕಾರ ಹೈದರಾಬಾದ್ ಗಡಿಯಾಚೆ ಗುಪ್ತಚಾರರನ್ನು ನೇಮಿಸಿತು. ನಿಜಾಂರು ಮಾಡುವ ಕುತಂತ್ರವನ್ನು "ನಿಜಾಂ ಸಂಸ್ಥಾನದಲ್ಲಿ ನಾದಿರಶಾಹಿ ರಾಜ್ಯ" ಎಂಬ ಹೆಸರಿನ ಲೇಖನ ಪ್ರಕಟಗೊಂಡಾಗ ಅಂದಿನ ಯೋಧರಿಗೆ ಸಹಾಯವಾಯಿತು. ದಿನಾಂಕ ೨.೧೧.೪೭ರಲ್ಲಿ ಪ್ರಕಟಗೊಂಡ 'ನಿಜಾಂ ಹುಡುಗಾಟಿಕೆ' ಎಂಬ ಲೇಖನ ರಜಾಕಾರರ ಸೋಗಲಾಡಿತನವನ್ನು ಬಯಲಿಗೆಳೆಯಿತು. "ಹೈದರಾಬಾದ್‌ಲ್ಲಿ ಕೊಲೆ, ಲೂಟಿ, ಸ್ತ್ರೀಯರ ಮಾನಭಂಗ" ಎಂಬ ಶೀರ್ಷಿಕೆಯಲ್ಲಿ ಸಂಯುಕ್ತ ಕರ್ನಾಟಕ ಅಲ್ಲಿಯ ಗಲಭೆಯ ಹೃದಯ ವಿದ್ರಾವಕ ದೃಶ್ಯಗಳನ್ನು ಯಥವತ್ತಾಗಿ ನಿರೂಪಿಸಿತು. ಹೇಡಿಗಳಂತೆ ಓಡಿಹೋಗಬೇಡಿರಿ ಎಂದು ಹೈದರಾಬಾದ್ ಹಿಂದೂಗಳಿಗೆ ಕಾಶೀನಾಥರಾವ್ ನೀಡಿದ ಕರೆಯನ್ನು ದಿನಾಂಕ ೮.೧೧.೧೯೪೭ರ ಪತ್ರಿಕೆಯ ಪ್ರಥಮ ಪುಟದಲ್ಲಿ ಪ್ರಕಟಿಸಿ ಹೋರಾಟಕ್ಕೆ ಇನ್ನಷ್ಟು ಬಲಬರುವಂತೆ ಮಾಡಿತು.[೭]

## ೪.೪. ರಜಾಕಾರರ ಕುರಿತು ಕೀರ್ತನೆ

ರಜಾಕಾರರ ದೌರ್ಜನ್ಯ ಹಿಂದೂಗಳ ಮೇಲೆ ನಿರಂತರ ನಡೆಯುತ್ತಿತ್ತು. ಸಿಕ್ಕ ಸಿಕ್ಕಲ್ಲಿ ದರೋಡೆ, ಸುಲಿಗೆ, ಅತ್ಯಾಚಾರ, ಹೆಣ್ಣು ಮಕ್ಕಳ ಶೀಲಹರಣ ಕಾರ್ಯಗಳು ೧೯೪೭-೪೮ರ ಸಂದರ್ಭದಲ್ಲಿ ಸಾಕಷ್ಟು

ನಡೆದವು. ಇದನ್ನೆಲ್ಲ ಗಮನಿಸಿದ ಜನರು ಭಯಭೀತರಾಗಿ ಅಸಹಾಯಕರಾಗಿ ನಿಂತಿದ್ದರು. ಆ ಹೊತ್ತಿಗೆ ಇಲ್ಲಿನ ಅನೇಕ ಜನಪರ ಹಾಡುಗಾರರು, ಪತ್ರಿಕೆಗಳು ಏನು ಕೆಲಸ ಮಾಡಿದವೋ ಅದರ ಹಿನ್ನೆಲೆಯಲ್ಲಿಯೇ ಕೀರ್ತನೆ ಹೇಳುತ್ತಾ ಅದರ ಮೂಲಕ ರಜಾಕಾರರ ದೌರ್ಜನ್ಯದ ವಿಷಯ ತಿಳಿಸುತ್ತಾ ಜನರಲ್ಲಿ ಜಾಗೃತಿಗೊಳಿಸಿದವರು ಕೊಪ್ಪಳದ ಜಯರಾಮಾಚಾರ್ಯರು. ಅವರನ್ನು "ಕೀರ್ತನ ಕೇಸರಿ" ಎಂದೇ ಕರೆಯುತ್ತಾರೆ.

ಇವರನ್ನು ನಿಜಾಂ ಸರಕಾರ ಕೀರ್ತಿಮಾಸ್ತರ ಎಂದು ನೇಮಕ ಮಾಡಿತ್ತು. ಇವರು ರೈಲ್ವೆ ಸ್ಟೇಷನ್‌ನಲ್ಲಿ ಬರುತ್ತಿದ್ದ ಅನೇಕ ಪ್ರಯಾಣಿಕರಿಗೆ ರಾಷ್ಟ್ರಾಭಿಮಾನ ಹುಟ್ಟಿಸುವ ಮಾತು ಆಡುತ್ತಿದ್ದರು. ಅಲ್ಲದೆ ಗಾಂಧೀಜಿ ಬಂದಾಗ ಅವರಿಗೆ ಸ್ವಾಗತ ಕೋರಲು ನಿಂತರು. ಸದಾ ಗಾಂಧೀ ವಸ್ತ್ರ, ಗಾಂಧೀ ಟೋಪಿ ಹಾಕಿಕೊಂಡ ಇವರ ದೇಶಾಭಿಮಾನ ಕಂಡು ನಿಜಾಂ ಸರಕಾರ ಇವರಿಗೆ ಎಚ್ಚರಿಕೆ ನೀಡಿತು. ಕೊನೆಗೆ ಜಯರಾಮಚಾರ್ಯರು ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ನೀಡಿ ತಾವು ಹೋರಾಟಗಾರರಿಗೆ ಸಹಾಯಕರಾಗಿ ಕೆಲಸ ಮಾಡಿದರು. ಗದಗ ಭಾಗದಲ್ಲೆಲ್ಲ ಸಂಚರಿಸಿದರು. ಮುಂದೆ ಕಲಬುರ್ಗಿ, ಕೊಪ್ಪಳ, ರಾಯಚೂರು, ಬೀದರ್ ಕಡೆ ಹಾಗೂ ಹೈದರಾಬಾದ್ ಕಡೆಗೂ ಸಂಚಾರ ಮಾಡಿದರು. ಈ ಸಂಚಾರದಲ್ಲಿಯೇ ಕೀರ್ತನೆ ಹೇಳುತ್ತಾ ನಡೆದರು. ಆ ಕೀರ್ತನೆಯಲ್ಲಿ ಇವರು ಮಾಡುತ್ತಿದು ಕೆಲಸವೆಂದರೆ ಸ್ವಾತಂತ್ರ್ಯದ ಗೀತೆಯನ್ನು ಹಾಡಿ ಜನರ ಮನಪರಿವರ್ತಿಸುವುದು. ಅದರೊಂದಿಗೆ ಸ್ವಾತಂತ್ರ್ಯ ಹೋರಾಟಗಾರರಿಗೆ ಸಂಪೂರ್ಣವಾದ ಸುದ್ಧಿ ಮಾಹಿತಿಗಳನ್ನು ತಿಳಿಸುವುದು.

ಕೀರ್ತನೆ ಕೇಸರಿ ಬಿರುದಾಂಕಿತ ಜಯರಾಮಾಚಾರ್ಯರು ತಮ್ಮ ಕಂಚಿನ ಕಂಠದ ಮೂಲಕ ಜನರಲ್ಲಿ ಒಂದು ಬಗೆಯ ಮೋಡಿ ಮಾಡಿದ್ದರು. ಇವರ ಹಾಡು ಕೇಳಿ ಪುರುಷರಷ್ಟೇ ಅಲ್ಲದೆ ಅಸಂಖ್ಯಾತ ಮಹಿಳೆಯರು ಈ ಹೋರಾಟಕ್ಕೆ ಮುಂದಾದರು. ಇದೊಂದು ಆಗ ದೊಡ್ಡ ಪ್ರೇರಣೆಯಾಯಿತು. ಅಸಹಾಯಕತೆಯಿಂದ ಕೂಡಿದ ಜನರಲ್ಲಿ ಹೋರಾಡುವ ನೈತಿಕ ಶಕ್ತಿಯನ್ನು ತುಂಬಿತು. ಆಗ ಸ್ವತಃ ಜಯರಾಮಚಾರ್ಯರು ಊರು ಊರು ತಿರುಗುತ್ತಾ ಹಾಡುತ್ತ ಎಲ್ಲಾ ಜಾತಿ ಜನಾಂಗದವರನ್ನು ಒಂದೇ ಎಂದು ಹೇಳಿ ಎಲ್ಲರಲ್ಲೂ ರಾಷ್ಟ್ರೀಯ ಆಂದೋಲನದ ಪರಿಕಲ್ಪನೆ ಮೂಡಿಸಿದರು. ಇವರ ಹಾಡು ಕೇಳುತ್ತಿದ್ದ ಜನ ತಮ್ಮಲ್ಲಿರುವ ಒಡವೆ, ವಸ್ತ್ರ, ಕಾಳುಕಡ್ಡಿಗಳನ್ನು ಅವರಿಗೆ ಕೊಡುತ್ತಿದ್ದರು.

ಜಯರಾಮಚಾರ್ಯರು ಇವೆಲ್ಲವನ್ನು ತೆಗೆದುಕೊಂಡು ಶಿಬಿರಗಳಲ್ಲಿದ್ದ ಸ್ವಾತಂತ್ರ್ಯ ಹೋರಾಟಗಾರರಿಗೆ ಮುಟ್ಟಿಸುವ ಕೆಲಸ ಮಾಡಿದರು. ಇವರ ಗಾಯನ ಕೇಳಿದ ಜನರೆಲ್ಲರು ಬಂಗಾರದ ಒಡವೆಯನ್ನು ಕೊಟ್ಟಿದ್ದರಂತೆ. ಅಂದರೆ ಜಯರಾಮಾಚಾರ್ಯರು ಕೀರ್ತನೆಯ ಮೂಲಕ ಎಷ್ಟೊಂದು ವ್ಯಾಪಕ ಪ್ರಚಾರ ಕೈಗೊಂಡಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಸಮೂಹ ಮಾಧ್ಯಮಗಳಲ್ಲಿ ಪತ್ರಿಕೆ ಎಷ್ಟು

ಮುಖ್ಯವಾಗಿ ಕಂಡಿತೋ ಈ ಕೀರ್ತನೆ ಸಾಹಿತ್ಯವು ಅಷ್ಟೇ ಮುಖ್ಯವಾಗಿ ಕಂಡಿದೆ ಎಂಬುದು ಜಯರಾಮಾಚಾರ್ಯರ ಕೀರ್ತನೆಗಳ ಮೂಲಕ ಅಭಿವ್ಯಕ್ತವಾಗುತ್ತದೆ.

**೪.೫. ಸಾಹಿತ್ಯ**

ಐತಿಹಾಸಿಕ ಹಿನ್ನೆಲೆ ಹೊಂದಿದ ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದ ಕಾಲಕ್ಕೆ ತನ್ನ ಇತಿಹಾಸವನ್ನು ಕರಾಳತೆಯ ಕೈಗೆ ಕೊಟ್ಟಿದೆ. ಇಂಥ ಸನ್ನಿವೇಶ ನೋಡಿದರೆ ಪತ್ರಿಕೆಗಳು ಮಾಡಿದ ಕೆಲಸ ಬಹು ಮಹತ್ವದ್ದಾಗಿವೆ. ಈ ಭಾಗದ ಬರಹಗಾರರೆಲ್ಲರು ಇದ್ದಂತೆ ವರದಿ ಮಾಡಿ, ಅನೇಕ ಸಂಗತಿಗಳನ್ನು ಪ್ರಕಟಿಸಿ, ಜನರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ತಮ್ಮ ಅವಿರತ ಸೇವೆ ಸಲ್ಲಿಸಿದರು. ಈ ಭಾಗದ ಜೈನರ ಕಾವ್ಯ, ಶರಣರ ವಚನ, ದಾಸರ ಹಾಡು, ಅನುಭವಿಗಳ ತತ್ವಪದ, ಪುರಾಣ, ಮಹಾಕಾವ್ಯಗಳು ಈ ನೆಲದಲ್ಲಿ ಹುಟ್ಟಿದವು. ವಿಮೋಚನಾ ಹೋರಾಟದ ಸಂದರ್ಭದಲ್ಲಿ ಕೀರ್ತನೆಗಳ ಮೂಲಕ ಜನರನ್ನು ಎಚ್ಚರಿಸುವ, ಹೋರಾಟಗಾರರಿಗೆ ಸ್ಫೂರ್ತಿ ನೀಡುವ, ಇದಕ್ಕಿಂತ ಹೆಚ್ಚಾಗಿ ಶಿಬಿರದ ನಾಯಕರಿಗೆ ಗುಪ್ತವಾಗಿ ಆಹಾರವನ್ನು ನೀಡುವ ಕೆಲಸ ಶುರುವಾಗಿತ್ತು. ಈ ಕೀರ್ತನೆ ಸಾಹಿತ್ಯದ ಮೂಲಕ ಕೊಪ್ಪಳದ ಜಯರಾಮಾಚಾರ್ಯರು ಮಾಡಿದ ಕೆಲಸವಂತೂ ಅಭೂತ ಪೂರ್ವವಾದದ್ದು. ಅದರೊಂದಿಗೆ ಬುಲಾಯಿ ಹಾಡುಗಳು, ಜನಪದ ಹಾಡುಗಳು, ಲಾವಣಿ ಹಾಡುಗಳು ಈ ಹೋರಾಟದ ಕುರಿತ ಅಂದಿನ ಮುಖ್ಯ ಹೋರಾಟದ ಸಂಗತಿಗಳನ್ನು ವ್ಯಕ್ತಪಡಿಸುತ್ತವೆ. ಸ್ವಾತಂತ್ರ್ಯದ ನಂತರವೂ ಈ ಭಾಗದಲ್ಲಿ ವಿಮೋಚನೆಯನ್ನು ಕಣ್ಣಾರೆ ಕಂಡ ಕವಿಗಳು ಸಾಹಿತಿಗಳು, ತಮ್ಮ ಬರಹಗಳಲ್ಲಿ ಬಹುಮುಖ್ಯವಾಗಿ ಈ ವಿಷಯಗಳನ್ನು ಬಳಸಿಕೊಂಡಿದ್ದನ್ನು ಕಾಣುತ್ತೇವೆ.

ಕಥೆ, ಕಾದಂಬರಿ, ಕಾವ್ಯ, ನಾಟಕಗಳ ಮೂಲಕ ಅವರು ವಿಮೋಚನಾ ಚಳುವಳಿಯನ್ನು ಸೆರೆ ಹಿಡಿಯಲು ಪ್ರಯತ್ನಿಸಿದ್ದಾರೆ. ಅಂಥವರಲ್ಲಿ ಶಾಂತರಸ, ಜಯತೀರ್ಥರಾಜ ಪುರೋಹಿತ, ಚಂದ್ರಕಾಂತ ಕುಸನೂರು, ಶಿವಲಂಕೆ, ಶ್ರೀನಿವಾಸ ಕುಲಕರ್ಣಿ ಮುಂತಾದ ಸಾಹಿತಿಗಳು ಸಾಹಿತ್ಯ ಸೃಷ್ಟಿಸಿದ್ದನ್ನು ಸ್ಮರಿಸತಕ್ಕದ್ದು. ಹೈದರಾಬಾದ್ ಕರ್ನಾಟಕದ ಪ್ರತಿಯೊಂದು ಜಿಲ್ಲೆಯಲ್ಲಿಯೂ ನಡೆದ ವಿಮೋಚನಾ ಹೋರಾಟ ಗಾಥೆಯನ್ನು ತಮ್ಮ ಕೃತಿಗಳ ಮೂಲಕ ಅನಾವರಣಗೊಳಿಸಿದ್ದಾರೆ. ಅನೇಕ ಲೇಖನಗಳು, ಪುಸ್ತಕಗಳು ಪ್ರಕಟಗೊಂಡು ಸಾಂದರ್ಭಿಕವಾಗಿ ಈ ದಾಖಲೆಯನ್ನು ಮಾಡುತ್ತಲೇ ಬಂದಿವೆ ಎಂಬುದನ್ನು ಮರೆಯಬಾರದು. ಆದರೂ ಈ ಸಾಹಿತ್ಯದಲ್ಲಿ ಹೆಚ್ಚಿನ ಕೆಲಸವನ್ನು ಇಂದಿನ ಸಂಶೋಧಕರು ಮಾಡಬೇಕಾದ ಅವಶ್ಯಕತೆ ಇದೆ. ಅನೇಕ ಹಳ್ಳಿಗಳಲ್ಲಿ ರಜಾಕಾರ, ಪಠಾಣರ, ಹಾಗೂ ಸಿಪಾಂರ ಕುರಿತು ಬೇರೆ ಬೇರೆ ಕಥೆ, ಹಾಡುಗಳನ್ನು ಹೇಳುವ ಸಾಕಷ್ಟು ಜನರಿದ್ದಾರೆ. ಅವರನ್ನು ಸಂಪರ್ಕಿಸುವುದರ ಮೂಲಕ ಆ ನಿಧಿಯನ್ನು ಪತ್ತೆ ಹಚ್ಚಿ ಸಂಗ್ರಹಿಸುವ ಕೆಲಸವೂ ಆಗಬೇಕಾಗಿದೆ.

ವಿಮೋಚನಾ ಹೋರಾಟದ ಕಾವು ಸ್ವಾತಂತ್ರ್ಯ ಹೋರಾಟಕ್ಕಿಂತ ಹೆಚ್ಚು ವ್ಯಾಪಕವಾಗಿಯೇ ನಡೆದಿದೆ. ರಜಾಕಾರರಿಂದ ನಡೆಯಲಾದ ಅತ್ಯಾಚಾರ, ಹಿಂಸೆ, ದರೋಡೆ, ಮಹಿಳೆಯರ ಶೀಲಹರಣ, ನರರಕ್ತದ ಕಾಲುವೆ ಹರಿದಿರುವುದನ್ನು ಸಾಹಿತ್ಯ ಜೀವಂತ ವಿಟ್ಟಿದೆ. ಈ ಹಿನ್ನೆಲೆಯಲ್ಲಿ ಚನ್ನನಗೌಡ ಮಾಸ್ತರ, ವಿರೂಪಾಕ್ಷಪ್ಪ, ನಲವಡಿ ಶ್ರೀಕಂಠಶಾಸ್ತ್ರಿಗಳು, ಸಿದ್ಧರಾಮಯ್ಯ ಮಠಮಠಿ ಮುಂತಾದವರು ಈ ಹೋರಾಟದಲ್ಲಿ ನೇರವಾಗಿ ಪಾಲ್ಗೊಂಡವರು. ಲಾವಣಿ ಹಾಡುಗಳು, ಗೀಗೀ ಪದಗಳು, ಬುಲಾಯಿ ಹಾಡುಗಳ ಮೂಲಕ ಅಂದಿನ ಚರಿತ್ರೆಯನ್ನು ಕಟ್ಟಿಕೊಟ್ಟು ಇವರು ಮಹಾದುಪಕಾರ ಮಾಡಿದ್ದಾರೆ. ಕೆಲವರು ತಿಳಿದು ಬರೆದರೆ ಕೆಲವರು ವಿಮೋಚನಾ ಹೋರಾಟದಲ್ಲಿ ಪಾಲ್ಗೊಂಡು ಬರೆದರು. ಚಾರಿತ್ರಿಕ ಹಾಗೂ ಐತಿಹಾಸಿಕವಾದ ಈ ಘಟನೆಗಳನ್ನು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಜೀವಂತವಿಟ್ಟಿರುವುದರಿಂದ ಹೋರಾಟದ ತೀವ್ರತೆಯನ್ನು ನಾವು ಇಂದೂ ಕಾಣತ್ತೇವೆ. ಸಾಹಿತ್ಯ ಹೇಗೆ ಭಿನ್ನ ಭಿನ್ನವಾಗಿ ಆ ಘಟನೆಯನ್ನು ತನ್ನ ದೃಷ್ಟಿಕೋನದಿಂದ ಚಿತ್ರಿಸಿದೆ ಎನ್ನುವುದನ್ನು ನಾವು ಗಮನವಿಟ್ಟು ನೋಡಬೇಕಾಗಿದೆ. ಶಾಂತರಸರ ಕಥೆಗಳಲ್ಲಿ ರಜಾಕಾರರ ಹಾವಳಿ ದಟ್ಟವಾಗಿ ಚಿತ್ರಿತವಾಗಿದೆ. ಶಾಂತರಸರು ಅಂದಿನ ದಿನಗಳಲ್ಲಿ ಅನುಭವಿಸಿದ ನಿಜಾಂನ ಆಡಳಿತದ ನೀತಿಗಳನ್ನು ಕಥೆಯಾಗಿ ಗಜಲ್‌ಗಳ ಮೂಲಕ ಖಂಡಿಸಿದರು. ಜೊತೆಗೆ ಜನತೆಯಲ್ಲಿ ವಿಮೋಚನಾ ಹೋರಾಟದ ಪ್ರಜ್ಞೆಯನ್ನು ಬೆಳೆಸುವ ಪ್ರಯತ್ನ ಇವರ ಕಥೆಗಳಿಂದ ನಡೆಯಿತು.

## ೪.೬. ಲಾವಣಿಗಳು

ರಜಾಕಾರರ ಹಾವಳಿಯನ್ನು ನೋಡಿ ಅದನ್ನು ಮುಖ್ಯ ವಸ್ತುವಾಗಿಟ್ಟುಕೊಂಡು ಈ ಭಾಗದ ಚನ್ನನಗೌಡ ಮಾಸ್ತರು ಗೀಗೀ ಪದ ಹಾಗೂ ನಲವಡಿ ಶ್ರೀಕಂಠಶಾಸ್ತ್ರಿಗಳು ಲಾವಣಿಗಳನ್ನು ರಚಿಸಿದರು. ಲಾವಣಿ ಜನಪದದ ಮುಖ್ಯ ಮಾಧ್ಯಮವಾಗಿದೆ. ಇಡೀ ಘಟನೆ ಚರಿತ್ರೆಯ ವ್ಯಕ್ತಿಯ ನೆಲೆಯಲ್ಲಿ ಸಾಮೂಹಿಕವಾಗಿ ಹೇಳಲು ಹೊರಟದ್ದು ವಿಶೇಷವಾಗಿದೆ. ನಿಜಾಂನ ಆಳ್ವಿಕೆಯ ಈ ಕ್ರೂರ ವ್ಯವಸ್ಥೆಯಿಂದ ಇಲ್ಲಿ ತತ್ತರಿಸಿ ಹೋದ ಜನರ ಬದುಕನ್ನು ಜೀವ ಹಿಂಡಿ ಬರುವಂತೆ ಚಿತ್ರಿಸಿದ್ದಾರೆ. ಶಿಬಿರಗಳ ಕುರಿತು ಉಲ್ಲೇಖವನ್ನು ನೀಡಿದ್ದಾರೆ. ಪೋಲಿಸ್ ಕಾರ್ಯಾಚರಣೆ ಬಂದಾಗ ಅವರು ಮಾಡಿಸಿದ ಕೆಲಸ ಅದನ್ನು ಕಣ್ಣಾರೆ ಕಟ್ಟುವಂತೆ ಮಾಡಿದೆ. ಇದೇ ಈ ಲಾವಣಿಗಳ ಬಹುಮುಖ್ಯ ವೈಶಿಷ್ಟ್ಯ.

ರಜಾಕಾರರು ಪ್ರತಿಯೊಂದು ಹಂತದಲ್ಲಿ ಹಿಂಸೆ ಕೊಡುತ್ತಿರುವುದನ್ನು ನೋಡಿದರೆ ಹಳ್ಳಿ ಹಳ್ಳಿಯಲ್ಲಿ ಇವರ ಹಾವಳಿ ಹೆಚ್ಚಾಗಿದ್ದನ್ನು ತಿಳಿಯಬಹುದು. ಆಗ ಜನರೆಲ್ಲ ಸೇರಿಕೊಂಡು ಶಿಬಿರಗಳನ್ನು ಸ್ಥಾಪಿಸಿದರು. ಶಿಬಿರಗಳ ಮೂಲಕ ಅನೇಕ ಹೋರಾಟ ನಡೆಸಿದರು. ನಿಜಾಂ ಸರಕಾರದ ಕಚೇರಿಗಳ

ಮೇಲೆ ಹೋರಾಟಗಾರರು ದಾಳಿ ಮಾಡಿ ಅಲ್ಲಿರುವುದನ್ನೆಲ್ಲ ದೋಚಿಕೊಂಡು ಹೋದರು. ಅನೇಕ ಸಾವು ನೋವುಗಳು ಸಂಭವಿಸಿದವು. ಇದನ್ನು ಕೆಲವೊಂದು ಊರಿನಲ್ಲಿ ಜನ ಕಥೆ ಕಟ್ಟಿ ಹೇಳುವುದನ್ನು ಗಮನಿಸಬಹುದು. ಮಳ್ಳಿ, ಗೋರಟಾ, ಲಾಡಚಿಂಚೋಳ್ಳಿ, ಕುಳಗೇರಿ ಮುಂತಾದ ಸ್ಥಳದಲ್ಲಿ ವಿದ್ರಾವಕ ಹೋರಾಟದ ವೀರಗಾಥೆಯನ್ನು ಜನರು ಹೇಳುತ್ತಾರೆ.

ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟ ನಡೆದದ್ದು ನಿಜಾಂ ಹಾಗೂ ರಜಾಕಾರರೊಡನೆ. ನಿಜಾಂನು ಹೈದರಾಬಾದ್ ಸಂಸ್ಥಾನಕ್ಕೆ ಭಾರತದೊಡನೆ ಸೇರಲು ಒಪ್ಪಿಗೆ ಕೊಡದೇ ತಾನೇ ಸ್ವತಂತ್ರ ಎಂದು ಘೋಷಿಸಿದ. ಎಲ್ಲಾ ಹಿಂದೂ ಜನರು ಕೆಲವು ಮುಸ್ಲಿಂ ಜನಾಂಗದವರೂ ಸಹ ಕೂಡಿಕೊಂಡು ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಅನಿವಾರ್ಯವಾಯಿತು. ಕೊನೆಗೆ ನಿಜಾಂನ ಆಳ್ವಿಕೆಯ ವಿರುದ್ಧ ಜನರು ಪ್ರತಿಭಟಿಸಿದರು. ಇದು ಹಿಂದೂ ಮುಸ್ಲಿಂಗಳ ನಡುವೆ ಇದ್ದಂತೆ ಕಂಡರು ಇದು ರಜಾಕಾರರ ವಿರುದ್ಧವಾಗಿತ್ತು. ರಜಾಕಾರರು ಸಂಪೂರ್ಣವಾಗಿ ಈ ಭಾಗ ಲೂಟಿ ಮಾಡಿದರು. ಹೀಗಾಗಿ ಅವರ ವಿರುದ್ಧ ಈ ಹೋರಾಟ ಅನಿವಾರ್ಯವಾಗಿತ್ತು. ರಜಾಕಾರರ ಹಿಂಸಾತ್ಮಕ ನೀತಿ, ದ್ವಂದ್ವನೀತಿ, ಆಡಳಿತ ಸಮಯದ ಸಾಧಕತನ ಇಂಥವುಗಳಿಂದ ಕೋಮುವಾದ ಬೆಳವಣಿಗೆಗೆ ಕಾರಣೀಭೂತವಾಯಿತು. ರಜಾಕಾರರು ಯಾವ ಮುಸ್ಲಿಂ ವ್ಯಕ್ತಿ ಹಿಂದೂ ಪರವಾಗಿರುತ್ತಾನೆಯೋ ಅವನನ್ನು ಕೊಲ್ಲಿಸಲು ಮುಂದಾದರು. ಅನೇಕ ಮುಸ್ಲಿಂರು ರಜಾಕಾರರ ಕ್ರೂರ ನೀತಿ ಪ್ರತಿಭಟಿಸಿದ್ದರು. ಆದರೆ ಇದನ್ನು ರಜಾಕಾರರು ಕೇಳಲಿಲ್ಲ. ಮುಸ್ಲಿಂರೆಲ್ಲ ನಿಜಾಂ ಬೇಕು ಎನ್ನಲಿಲ್ಲ ಎಂಬುದನ್ನು ನಾವು ಸಾಹಿತ್ಯ, ಸಾಂಸ್ಕೃತಿಕ ಹಾಗೂ ಚಾರಿತ್ರಿಕ ದಾಖಲೆಗಳ ಮೂಲಕ ಅರಿಯಬಹುದಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಲಾವಣಿಗಳು ಸಾಕಷ್ಟು ನಮಗೆ ಲಭ್ಯವಾಗುತ್ತವೆ. ಪ್ರಾರಂಭದಲ್ಲಿ ಚೆನ್ನನಗೌಡ ಮಾಸ್ತರ ಜೀ ಪದಗಳನ್ನು ಅವರೇ ಬರೆದು ಪ್ರಕಟಿಸಿದ್ದನ್ನು ಕಾಣುತ್ತೇವೆ. ಅವರು ಪ್ರಾರಂಭದಲ್ಲಿ ಆ ವಿಮೋಚನೆ ಘಟನೆ ಕಣ್ಣಾರೆ ಕಂಡದ್ದರಿಂದಲೇ

“ಮೊದಲು ರಾಜಧಾನಿ ಸುದ್ದಿ ಕೇಳ್ರಿ
ನಮ್ ನಿಜಾಂರಿರುವರೀಗ ಬಹಳ ಮುಪ್ಪಿನವರಾ
ಹಿರಿಸೊಸಿ ಅಧಿಕಾರ
ಅಂತಾರ ಅವರ ಮನೆಯೊಳು ಬಹಳ ಬಗಿತಾರ ಹೋ ಜೀ
ಇಸ್ಲಾಂ ಅಂಥಾ ಚಲೋದ್ ಇಸ್ಲಾತಾ ಇಂಥಾ ಚಲೋದ್
ಕೇಶ್ರಾಂತ ಅವರ ತಿಳಿಸಿ ಹೇಳ್ಯಾರಾ ಉಳಿದ ಮತಗಳನೆಲ್ಲಾ ಅವರು
ನಿಜಾಂರ ಮುಂದೆ ಮನಬಲ್ಲಂತೆ ಅಲ್ಲಗಳೆದಾರಾ”[೮]

ಚನ್ನನಗೌಡ ಮಾಸ್ತರ ಯಲಬರ್ಗಿ ಅವರು ಜೀ ಪದಗಳನ್ನು ರಚಿಸಿದ್ದಾರೆ. ಅವರು ಸಂಪೂರ್ಣ ಈ ಹೋರಾಟದ ವಿವರವನ್ನು ಕೊಡುತ್ತಾರೆ. ನಲವತ್ತೈದು ಪುಟಗಳ ಹದಿನಾಲ್ಕು ಪ್ರಕರಣಗಳಲ್ಲಿ

ಇದನ್ನು ದಾಖಲಿಸಿದ್ದಾರೆ. ಹೋರಾಟದ ಆರಂಭದ ದಿನಗಳು ಹೇಗೆ ಭಯಾನಕವಾಗಿದ್ದವು ಎಂಬುವ ವಿವರ ನೀಡಿದ್ದಾರೆ. ಭಾರತ ಸ್ವಾತಂತ್ರ್ಯಗೊಂಡರೂ ಈ ಭಾಗ ಸ್ವಾತಂತ್ರ್ಯ ಪಡೆಯಲಿಲ್ಲ ಎಂಬುದನ್ನು ಹೇಳಿ, ಕಲಬುರ್ಗಿಯ ವಿಮೋಚನಾ ಹೋರಾಟದ ನೇತಾರರಾಗಿದ್ದ ಶರಣಗೌಡರು ಹೇಗೆ ರಜಾಕಾರರಿಗೆ ಸಿಂಹ ಸ್ವಪ್ನವಾಗಿದ್ದರು ಎಂಬುದನ್ನು ಉಲ್ಲೇಖಿಸುತ್ತಾರೆ.

‘‘ಗುಪ್ತವಾಗಿ ಕಾರ್ಯಸಾಧಿಸಿ, ವೈರಿಜನರಿಗೆ ಮಣ್ಣು ಮುಕ್ಸಿ, ಕೀರ್ತಿ ಪಡೆದಾರಾ ಕಲುಬುರುಗೆಯ ಶರಣಗೌಡರಾ| (ಇವರ್ನಾ) ಹಿಡಿದುಕೋದ್ರಿ ಸಾವಿರಗಟ್ಲೆ, ಇನಾಮು ಕೊಡಲೇವಂತ ಸಾರ್‍ಯಾರಾ, ಆ ಊರಿನ ಸುಬೇದಾರರಾ| ಆಗ್ ಯಾರಿಗನಾ ಪತ್ತೇ ಆಗದಾಂಗ, ಯುಕ್ತೀ ತೋರ್‍ಯಾರ್ ಶರಣಗೌಡರ, ಗೆಳೆಕಾರೂಬ್ರ ಪರೂತಯ್ಯ ಬಾಬಾ ಪೇಟಾರಾ| ರಜಕಾರರ ಗುಂಡಿನೇಟಿಗೆ ಇವರು ತಮ್ಮ ಬಲಗೈಯೊಂದನ್ನಾಹುತಿ ಕೊಟ್ಬಾರಾ ಹೋ ಜೀ’’[೯]

ನಿಜಾಂನ ಸ್ವತಂತ್ರ ನೀತಿಯಿಂದ ರಜಾಕಾರರು ತಮಗಿಷ್ಟವಾದ ರೀತಿಯಲ್ಲಿ ಲೂಟಿ, ಅತ್ಯಾಚಾರ ಮಾಡುತ್ತಿದ್ದರು. ಜನರ ನೋವು ನಲಿವುಗಳನ್ನು ಕೇಳುವವರೇ ಇಲ್ಲವಾಯಿತು. ಸ್ವಾತಂತ್ರ್ಯ ಬಂದ ನೆಪದಲ್ಲಿ ಮಂತ್ರಿಯಾಗಿ ಅಧಿಕಾರದ ನೆಪದಲ್ಲಿ ಎಲ್ಲರೂ ಮೈ ಮರೆತರು. ಈ ಸಂಸ್ಥಾನದ ಕಡೆಗೆ ಒಬ್ಬರೂ ಹಿಂತಿರುಗಿ ನೋಡಲಿಲ್ಲ. ಆಗ ಅನಿವಾರ್ಯವಾಗಿ ಇಲ್ಲಿನ ಜನ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಹೋರಾಟಕ್ಕಿಳಿದರು. ರಮಾನಂದ ತೀರ್ಥರ ನೇತೃತ್ವದಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್‌ನ ಮೂಲಕ ಜನರಲ್ಲಿ ಹೋರಾಟಕ್ಕೆ ಧೈರ್ಯ, ಸ್ವಾಭಿಮಾನ ತುಂಬಲು ಎಲ್ಲಾ ಜಾತಿ ಜನ ಒಂದಾಗಲು ಜೀ ಪದ ರಚಿಸಿದರು.

‘‘ನಮಜಾತಿ ನಿಮಜಾತಿ ಎಲ್ಲಾ ಜಾತಿಯ ವಿಚಾರಿಸಿ ನೋಡಿ
ಒಂದೇ ಐತಿ ಮಾನವ ನೀತಿ
ಹಿಂದೂ ಇರಲಿ ಅಥವಾ ಮುಸ್ಲಿಂ ಇರಲಿ ರಾಜ್ಯದಲಿ
ಎಲ್ಲರಿಗೂ ಸಮಾನ ಹಕ್ಕೈತಿ’’[೧೦]

ಎಂದು ಹೇಳಿ ಜಾತಿಗಳಲ್ಲಿ ಭೇದ ಭಾವ ಇಲ್ಲ ಎಂದೂ ಹೋರಾಟಕ್ಕೆ ಮುಂದಾಗಿ ಹಿಂದೂ ಮುಸ್ಲಿಂ ಒಂದೇ ಎಂದು ಹೇಳಿದರು. ಆಗ ಸ್ವಾಮಿ ರಮಾನಂದತೀರ್ಥರು ಹೈದರಾಬಾದ್ ಸಂಸ್ಥಾನದ ಒಪ್ಪಂದಕ್ಕಾಗಿ ಅನೇಕ ಬಾರಿ ಪ್ರಯತ್ನಿಸಿದರು. ರಜಾಕಾರರ ರಾಕ್ಷಸ ಕೃತ್ಯ, ಅವರಾಡುವ ಸೋಗಲಾಡಿತನ ಈ ಹಾಡಿನಲ್ಲಿ ಬಂದವು. ಸತ್ಯಾಗ್ರಹ ನಿಜಾಂ ಪ್ರಜೆಗಳ ಚಳವಳಿ, ನಿಜಾಂ ಪೋಲಿಸ್, ಸರಕಾರಿ ಜನರ ಅತ್ಯಾಚಾರ ಮಿಲಿಟರಿ ದಾಳಿ ಕೊನೆಗೆ ನಿಜಾಂರು ಶರಣಾಗುವ ತನಕ ಹಾಡು ಕಟ್ಟಿ ಹಾಡಿದ್ದಾರೆ. ಶಿಬಿರಗಳು ಉದ್ಭವ ಆಗುವ ರೀತಿ ನೀತಿಗಳನ್ನು ಕುರಿತು ಇಲ್ಲಿ ಯಥಾಸ್ಥಿತಿಯಲ್ಲಿ ದಾಖಲಿಸಿದ್ದಾರೆ.

‘‘ಹುಟ್ಟಿದವೋ ಶಿಬಿರಾ ಸರಹದ್ ಶೀಮೆಯ ಊರೂರಲ್ಲಿ ಹುಟ್ಟಿದೋ
ಶಿಬಿರಾ ಆ, ಆ,

ರೈತರ ಗೋಳನು ಕಳಿಯುವುದಕ್ಕಾಗಿ ನೈತಿಕ ಬಲವನು ಬೆಳೆಸುವುದಕ್ಕಾಗಿ
ಶೈತಾನಿ ಕಾರಬಾರ ಅಳಿಯಬೇಕೆಂದು ಹುಟ್ಟಿದವೊ ಶಿಬಿರಾ ಆ, ಆ,''[11]

ರಜಾಕಾರರ ವಿರುದ್ಧ ಕ್ರಾಂತಿಗಾಗಿ ಈ ಶಿಬಿರಗಳು ಉದ್ಭವಿಸಿದವು. ಶಸ್ತ್ರಾಸ್ತ್ರ ಹೊಂದಿ ಅನೇಕ ರೀತಿಯ ದಾಳಿಗೆ ಅವರು ಯುವಕರನ್ನು, ಮಹಿಳೆಯರನ್ನು ಅಪಾರ ಸಂಖ್ಯೆಯಲ್ಲಿ ಕರೆತಂದರು. ಶಿಬಿರದ ನಾಯಕರೆಲ್ಲ ಸೇರಿ ನಾನಾ ರೀತಿಯಿಂದ ಹೋರಾಟಕ್ಕೆ ಸಜ್ಜಾದರು. ಅನೇಕ ಪ್ರಾಂತ್ಯಗಳು ಹಾಗೂ ಗಡಿ ಭಾಗಗಳಲ್ಲಿದ್ದುಕೊಂಡು ಶಿಬಿರದ ನಾಯಕರು ಹೋರಾಟಕ್ಕೆ ಸ್ಫೂರ್ತಿ ನೀಡಿದರು. ಇದನ್ನು ಕಂಡ ನಿಜಾಂ ಇಲ್ಲಿನ ಹೋರಾಟಗಾರರ ಸುಳಿವು ನೀಡಿದವರಿಗೆ ಹಣ, ಅಧಿಕಾರ, ಬಹುಮಾನ ನೀಡುವುದಾಗಿ ಹೇಳಿಕೆ ನೀಡಿದ.

''ಶಿಬಿರದವರ ದರ್ಪಕ್ಕಂಜಿ, ರೈತಜನರು ಚಂದಾಕೊಟ್ಟಾರಾ| ಕೊಟ್ರ್ಯಾ
ಕಂತಾ ಪೋಲಿಸ್ರು ಹೊಡೆದರೆ, ದಂಡತೆತ್ತಾರಾ| ಶಿಬರಿದವರು ರಾತ್ರೀ
ಬಂದು ಹಳ್ಳಿ ಹಳ್ಳಿಗೆ ಝುಂಡಾ ಹಚತಾರಾ| ಮುಂಜನೆದ್ದು ಪೋಲಿಸ್ರು
ಬಂದು, ನಿಮದೇ ಐತಿ ಒಳಸಂಚು ಅಂತ ರೈತರ್ನ ಬಡೀತಾರಾ ಹೋ||''[12]

ಈ ರೀತಿಯಾಗಿ ನಿಜಾಂನು ಹೇಳಿಕೆ ಹೋರಡಿಸಿದ. ಆದರೆ ಸಾಮಾನ್ಯ ಜನರ ರೈತರನ್ನು ಹಿಡಿದು ಚಂದಾ ನೀಡಬೇಕು, ಪೋಲಿಸರಿಗೆ ಸುಳಿವು ನೀಡಬೇಕು, ದಂಡ ಕೊಡಬೇಕು ಎಂದು ಅವರಿಗೆಲ್ಲ ಅನೇಕ ಹಿಂಸೆ ನೀಡಿದ. ರೈತಾಪಿ ಜನರು ಶಿಬಿರಗಳು ರಚನೆ ಆದ ಮೇಲೆ ಹೆಚ್ಚಾಗಿ ನೋವು ಅನುಭವಸುವಂತಾಯಿತು ಎಂಬುದು ಎಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ.

**ನಲವಡಿ ಶ್ರೀಕಂಠಶಾಸ್ತ್ರಿ ಅವರ ಲಾವಣಿ :** ನಲವಡಿ ಶ್ರೀಕಂಠಶಾಸ್ತ್ರಿಗಳು ಒಬ್ಬ ನಾಟಕಕಾರರು. ಈ ಭಾಗದಲ್ಲಿ ಅತ್ಯಂತ ಶ್ರೇಷ್ಠ ನಟರು, ಕವಿ, ಹಾಡುಗಾರ, ಜನಪದ ತಜ್ಞರು. ನಲವಡಿ ಶ್ರೀಕಂಠಶಾಸ್ತ್ರಿಗಳು ನಾಟಕಕ್ಕೆ ನೀಡಿದ ಕೊಡುಗೆ ಅವಿಸ್ಮರಣೀಯವಾದದ್ದು. ಇಂತಹ ಒಬ್ಬ ವ್ಯಕ್ತಿ ''ಹೈದರಾಬಾದ್ ರಜಾಕಾರರ ಲಾವಣಿ'' ರಚಿಸಿದ್ದಾರೆ. ಇವರು ರಚಿಸಿದ ಲಾವಣಿ ಕೇವಲ ಮೂವತ್ತೆಂಟು ನುಡಿಯದು. ಈ ಸ್ವಲ್ಪದರಲ್ಲಿಯೇ ಈ ಲಾವಣಿ ಅತ್ಯದ್ಭುತವಾದದ್ದು. ವಿಮೋಚನಾ ಕುರಿತು ಮಾತನಾಡುವಾಗ ನಲವಡಿ ಶ್ರೀಕಂಠಶಾಸ್ತ್ರಿಗಳ ಉಲ್ಲೇಖ ಮಾಡದೇ ಮುಂದೆ ಹೋಗುವಂತಿಲ್ಲ. ಇದು ಒಂದು ಇತಿಹಾಸ ಕಾವ್ಯವಾಗಿದೆ. ನಲವಡಿ ಶ್ರೀಕಂಠಶಾಸ್ತ್ರಿಗಳು ಕೇವಲ ಯಾರಿಂದಲೋ ನೋಡಿ, ಕೇಳಿ ತಿಳಿದುಕೊಂಡು ಬರೆದವರಲ್ಲ. ಅವರು ಸಂಪೂರ್ಣ ತಾವೆ ಕಣ್ಣಾರೆ ನೋಡಿ ಕಿವಿಯಾರೆ, ಕೇಳಿದ ದಾಖಲೆಗಳು ಇಲ್ಲಿವೆ. ನಾಡಿನ ಶ್ರೇಷ್ಠರಲ್ಲಿ ಒಬ್ಬರಾದ ಇವರು ತಮ್ಮ ಅನುಭವದ ಮೂಲಕ ಅಕ್ಷರಗಳನ್ನು ಬಳಸಿ ಅದಕ್ಕೆ ತಾಜಾತನವನ್ನು ಹೊಸತನವನ್ನು ತಂದು ಕೊಡಲು ಪ್ರಯತ್ನಿಸಿದರು.

ಈ ಭಾಗದ ನಿಜಾಂನ ಚರಿತ್ರೆಯನ್ನು ಶ್ರೀಕಂಠಶಾಸ್ತ್ರಿಗಳು ತುಂಬಾ ಮಾರ್ಮಿಕವಾಗಿ ಹೇಳುತ್ತಾರೆ. ರಜಾಕಾರರ ಶರಣಗತಿಯ ಕಥೆ ಹಾಗೂ ಕಾಂಗ್ರೆಸಿಗರ ಕಣ್ಣೀರಿನ ಕಥೆಯನ್ನು ತುಂಬಾ ವ್ಯವಸ್ಥಿತವಾಗಿ

ತಿಳಿಸುತ್ತಾರೆ. ಭಾರತ ಸ್ವಾತಂತ್ರ್ಯವಾಯಿತು. ಬ್ರಿಟಿಷರ ಆಳ್ವಿಕೆ ಮುಗಿದು ಹೋಯಿತು. ಹೈದರಾಬಾದ್ ಪ್ರಾಂತ್ಯ ಹಾಗೇ ಉಳಿಯಿತು. ಕಾಂಗ್ರೆಸ್ಸಿಗರೆಲ್ಲ ಸೇರಿ ಹೈದರಾಬಾದ್ ಸಂಸ್ಥಾನ ಭಾರತ ಒಕ್ಕೂಟ ಸೇರಲು ಹವಣಿಸಿದರು. ಅದರ ಮೂಲಕ ಕಾಂಗ್ರೆಸ್ಸಿಗರು "ಇತ್ತೇಹಾದ್" ರಜಾಕಾರರು ರಕ್ತದ ಕಾಲುವೆ ಹರಿಸಿ ಜನರೆನ್ನೆಲ್ಲ ರಕ್ತದ ಮಡುವಿನಲ್ಲಿ ಮುಳುಗಿಸಿದರು. ಕಾಶಿಂ ರಜವಿ ನೀತಿಯನ್ನು ಹೇಳಿದರು. "ಇಮ್ರಾಜ್" ಪತ್ರಿಕೆಯ ಸಂಪಾದಕರು ಮಾಡಿದ ಧರ್ಮಯುಕ್ತ ಕೆಲಸ ಎಂದು ನೆನಪಿಸುತ್ತಾರೆ. ಕಲಬುರ್ಗಿ ಜಿಲ್ಲೆಯಲ್ಲಿನ ಘಟನೆಯನ್ನು ಈ ರೀತಿ ಚಿತ್ರಿಸಿದ್ದಾರೆ.

"ಗಾಣದಾಳ ಸ್ಟೇಶನ್ನಾವಿ ಗಾಡಿಯ ನಿಲ್ಲಿಸಿ ಲೂಟಿಯ ಮಾಡಿದರು
ಮಾನವತಿಯಾದನು ಹಿಡಿದಳದೂಯ್ಯತೆ ಮಾನ ಹಾನಿಯನ್ನಸಗಿದರ"[೧೩]

ಗಾಣದಾಳ ಸ್ಟೇಶನ್ ಮೇಲೆ ಆದ ದಾಳಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಇಲ್ಲಿ ಮಹಿಳೆಯರು ಕೂಡ ಶೌರ್ಯದಿಂದ ಹೋರಾಟ ಮಾಡಿದ್ದನ್ನು ಇಲ್ಲಿ ನೋಡುತ್ತೇವೆ.

"ಕನ್ನಡ ಕಡುಗಲಿ ಕೆ.ಎಸ್.ಪಾಟೀಲರು ರಕ್ಷಕ ದಳ ರಚಿಸಿದರು
ಮುನ್ನಡೆಯ ರಜಾಕರರಲ್ಲಿಯು ನಿಲ್ಲದಂತೆ ಪ್ರತಿಭಟಿಸಿದ್ದರು
ಮಾನ್ಯ ಮಹೋದಯ ಶರಣಗೌಡ ಗುಲಬುರ್ಗಿಯ ಕಾರ್ಯನಿಕೇತನರು
ಮಣ್ಣು ಮುಕ್ಕಿಸುವ ವೈರಿಯ ಜೀವದ ಹಂಗುದೊರೆದು ಕಾದಾಡಿದರು
ಕಣ್ಣು ಕಂಡ ಕಡೆ ಗೊಂಡುತಲಿದ್ದರು ಕಾಸೀಮ ರಜವೀ ಬೆನ್ನಿಗರು"

ಈ ರೀತಿ ಹೋರಾಟ ಮಾಡಿದ ವೀರರನ್ನು ಕುರಿತು ಹಾಡಿದರು. ಭಾರತ ಸ್ವಾತಂತ್ರ್ಯದೊಂದಿಗೆ ವಿಮೋಚನಾ ಹೋರಾಟದಲ್ಲಿ ನಿಜಾಂ ಶರಣಾಗತಿ ಆಗುವವರೆಗೂ ಇಲ್ಲಿ ಚಿತ್ರಣ ಬಂದಿದೆ.

"ಏರಲೀ ರಾಷ್ಟ್ರೀಯ ಧ್ವಜ ಹೈದರಾಬಾದಿನ ಸರ್ವಜಗಜನದಿ
ಆರತಿಗೈದರು ಭಾರತ ಮಾತೆಗೆ, ಪ್ರೇಮದಿಂದ ಇಂದು ಭಗನಿ"[೧೫]

ಹೈದರಾಬಾದ್ ರಜಾಕಾರರ ಕುರಿತು ಇಂದಿಗೂ ತನ್ನ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಮಹಾನ್ ಸಾಧನೆಯಲ್ಲಿ ನಲವಡಿ ಶ್ರೀಕಂಠಶಾಸ್ತ್ರಿಗಳ ಹಾಡು ಮುಖ್ಯವಾಗಿದೆ.

## ೪.೭. ಬುಲಾಯಿ ಹಾಡುಗಳು

ರಜಾಕಾರರ ಹಾವಳಿಯಿಂದ ಅನೇಕ ಗ್ರಾಮಗಳಲ್ಲಿ ಅತ್ಯಾಚಾರ, ದರೋಡೆ, ಕೊಲೆ, ಸುಲಿಗೆ, ನಡೆದವು. ಅನೇಕ ಭಯಾನಕ ಘಟನೆಗಳನ್ನು ಕಂಡ ಜನರು ತತ್ತರಿಸಿ ಹೋದರು. ಅಂತಹ ಭೀಕರ ಘಟನೆಗಳನ್ನು ಕಂಡು ಅನೇಕ ಕವಿಗಳು ತಮ್ಮ ಸಾಹಿತ್ಯದಲ್ಲಿ ಅದನ್ನು ಹಿಡಿದು ಜನರಿಗೆ ತಿಳಿವ ರೀತಿಯಲ್ಲಿ ಹಾಡಿದ್ದಾರೆ. ತತ್ವಪದಕಾರರು, ಗೀಗೀ ಪದಕಾರರು, ಜೀಜೀ ಪದಕಾರರು ಲಾವಣಿಕಾರರು ಮತ್ತು ಬುಲಾಯಿ ಹಾಡುಗಾರರು ಸೇರಿ ರಜಾಕಾರರ ವಿರುದ್ಧ ಅನೇಕ ಹಾಡುಗಳನ್ನು ಕಟ್ಟಿ ಅವರ (ರಜಾಕಾರರ) ಬರುವಿಕೆಯನ್ನು ತಮ್ಮ ಹಾಡುಗಳ ಮೂಲಕ ಜನರಿಗೆ ತಿಳಿಸಿ ಎಚ್ಚರಿಕೆಯಿಂದಿರಲು

ಹೇಳುತ್ತಿದ್ದರು. ಬೀದರ್, ರಾಯಚೂರು, ಕೊಪ್ಪಳ ಜಿಲ್ಲೆ ಅಲ್ಲದೇ ಗುಲಬರ್ಗಾ ಭಾಗಗಳಲ್ಲಿ ಸಂಚರಿಸಿ ಜನರಲ್ಲಿ ಧೈರ್ಯ ತುಂಬುತ್ತಿದ್ದರು. ಹೈದ್ರಾಬಾದ್ ಕರ್ನಾಟಕದ ಅನೇಕ ಭಾಗಗಳಲ್ಲಿ ನಿಜಾಂ ಮತ್ತು ರಜಾಕಾರರ ವಿರುದ್ಧ ಹೋರಾಡಿ ಸಾವನ್ನಪ್ಪಿದ ಅನೇಕ ವೀರನಾಯಕರ ಚರಿತ್ರೆಯನ್ನು ಮತ್ತು ಅಲ್ಲಿನ ದುರಂತ ಚಿತ್ರಣವನ್ನು ಶ್ರೀ ವಿರೂಪಾಕ್ಷ ಮಠಮನೆ ಮತ್ತು ಶ್ರೀ ವಿರುಪಾಕ್ಷಯ್ಯ ಮಠಮನೆ ಇವರಿಬ್ಬರು ತಾವು ಕಣ್ಣಾರೆ ಕಂಡು ಕಣ್ಣೀರಿಟ್ಟು ೧೦೮ ನುಡಿಗಳ ಬುಲಾಯಿ ಹಾಡನ್ನು ರಚಿಸಿದ್ದಾರೆ. ಅನೇಕ ದುರಂತ ಚಿತ್ರಣದ ಕೆಲ ಸಾಲುಗಳು ಇಲ್ಲಿವೆ.

"ಮಿತಿ ಚೈತ್ರ ಅಮವಾಸಿ ದಿನ
ಮುಂಜಾನೆ ಸೂರ್ಯಗ್ರಹಣನೇಮಸ್ತ
ಮಾಡಿರೋ ಆದಿನ ||ಕೋಲೆಣ್ಣಾ ಕೋಲ||

ಹುಮನಾಬಾದಿ ರಾಜೇಶ್ವರ ಕಲ್ಯಾಣ
ಜಹಗೀರ ನೆರದಾರೋ ರಝಾಕಾರ ||ಕೋಲೆಣ್ಣಕೋಲ||

ಕಂಬಾರ ಚಿಂಚೋಳಿ ನಾವದಿಗಿ ಬೆಲ್ಲಳ್ಳಿ
ಹೊಂಟಾರೋ ಎಲ್ಲಾರುಗೋಳಿ ||ಕೋಲೆಣ್ಣಕೋಲ||

ಹುಣಸನಾಳ ವರವಟ್ಟಿ ತುರುಕರಿಗಿಲ್ಲ
ಚಿಂದೋಟ್ಟಿ ಗೋರಟಿ ಹೋಗುದು
ಮುಂಜಾನೆ ಘಟ್ಟ ||ಕೋಲೆಣ್ಣಾ ಕೋಲ||

ಘೋರವಾಡಿ ಮುಖ್ಯಕೇಂದ್ರ ಲಂಗ್ಯ
ತುರುಕರ ಚೋರ ಮಾಡ್ಯಾರೋ ಅಲ್ಲಿ
ಕರಾರ ||ಕೋಲೆಣ್ಣಕೋಲ||

ತೊಗಲಾರ ಮುಚಳಂಬಿ
ಬೋರೊಳ ಮೊರಂಬಿ ಏನಿಲ್ಲದೆ
ಎರದರೋ ಮೈತುಂಬಿ ||ಕೋಲೆಣ್ಣಕೋಲ||

ಖಾಸಿಮ ರಜವಿಯನ್ನು
ಬೋಧಾ ಮಾಡಿದವರನ್ನು ಎಲ್ಲಾರು
ಕೂಡಿ ಮುಕತಾರ ಮಣ್ಣ ||ಕೋಲೆಣ್ಣಾ ಕೋಲ||

ಮುಂಜಾನೆಂಟು ತಾಸಿಗೆ ದನಕರು
ಬಿಡುವದರೊಳಗೆ ಸುರು ಮಾಡ್ಯಾರ
ಗೋಲಿ ಬರುವಾಗ ||ಕೋಲೆಣ್ಣಕೋಲ||

ಊರೊಳಗಿನ ಜನರೆಲ್ಲ ಏರ್ಯಾರೋ ಮಾಳಿಗಿ
ಮ್ಯಾಲಾ ಮುಂದಿನ ಆಶೆ ಒಬ್ಬರಿಗೆಲ್ಲ ||ಕೋಲೆಣ್ಣಕೋಲ||

ಜೀವ ಹೋದರ ಪರವಿಲ್ಲ ಓಡಿ
ಹೋಗುವರೆಲ್ಲಾ ಹೀಗೆಂದು
ನುಡದಾರೋ ಹಿಂದುರೆಲ್ಲ ||ಕೋಲೆಣ್ಣಾ ಕೋಲ||

ಈ ಶಬ್ದ ತುರುಕರು ಕೇಳಿ ಹಾಕ್ಯಾರೋ
ಗೋಲಿ ಮಳಿ ಸುರದಂಗ
ಬಂದೂಕ ಗೋಲಿ ||ಕೋಲೆಣ್ಣಕೋಲ||

ಈ ಕ್ರಾಂತಿ ಕಾರ್ಯದೊಳಗೆ
ಹೆಣ್ಣು ಮಕ್ಕಳು ಆವಾಗ ಟೊಂಕ
ಕಟ್ಟಿ ನಿಂತರು ಮೇಲೆ ||ಕೋಲೆಣ್ಣಕೋಲ||

ಹೆಣ್ಣು ಮಕ್ಕಳು ಕಲ್ಲು ಕೊಡುವರು
ಗಂಡಸರು ಹೊಡೆಯುವರು ಮೂರು
ತಾಸು ಹಟಾಸಿದರು ||ಕೋಲೆಣ್ಣಾ ಕೋಲ||

ತುರುಕರು ಸೇರಿ ಊರೊಳಗೆ ಮನಸಿಗೆ
ಬಂದಹಾಗೆ ನಡೆಸಿದರೋ ಹೆಚ್ಚಿನ ದಂಗೆ ||ಕೋಲೆಣ್ಣಕೋಲ||

ಸಿಕ್ಕಷ್ಟು ಜನರಿಗೆ ಹೊಡದಾರೋ ಜಗಿ ಜಗಿ
ಒಬ್ಬರ ಸುದ್ಧಿ ಇಲ್ಲದಂಗಾಗಿ ||ಕೋಲೆಣ್ಣಕೋಲ||

ಅವಾಗ್ಗೆ ರಝಾಕಾರರು ಹಿರೇಮಠಕ್ಕೆ
ಬಂದಿದ್ದರು ಬಾಗಿಲ ತೆರೆರೆಂದಿದರು ||ಕೋಲೆಣ್ಣಾ ಕೋಲ||

ತೆರಿಯಿರೆಪ್ಪಬಾಗಿಲ ನಿಮಗೇನು ಮಾಡು
ವದಿಲ್ಲ ಹೀಗಂತರ ರಝಾಕಾರರೆಲ್ಲ ||ಕೋಲೆಣ್ಣಕೋಲ||

ಮಾಡುವರೇನು ಇಲ್ಲಿ ಮನಸ್ಸಿಗೆ ತಿಳಿದಾನಲ್ಲಿ
ರಾಚಯ್ಯಸ್ವಾಮಿ ಬಂದಾನಲ್ಲಿ ||ಕೋಲೆಣ್ಣಕೋಲ||

ಬಾಗಿಲ ತೆರೆಯುವಷ್ಟರಲ್ಲಿ ಹೊಡೆದರೋ
ಬರ್ಚಿಲಿ ನೆಟ್ಟಿತೋ ಹೊಟ್ಟೆಯಲ್ಲಿ ||ಕೋಲೆಣ್ಣಾ ಕೋಲ||

ಅಯ್ಯೋ ಶಿವ ಭಗವಂತ ವ್ಯಾಳೆ ಹೆಂತಾದೊ
ಬಂತ ಆಯಿತೋ ಈ ದಿನ ಘಾತ ||ಕೋಲೆಣ್ಣಕೋಲ||

ಎಮ್ಮಿಯ ಮಸ್ತಾನನು ಅಂಗಳಾಗ ಹಾಕಿದನು
ಮೈಯಲ್ಲ ಗಾಯ ಮಾಡಿದನು ||ಕೋಲೆಣ್ಣಕೋಲ||

ಹೊಟ್ಟ್ಯಾಗಾಗ್ಯಾದೋ ಬೆಂಕಿ ಬುಕ್ಕುತಾನೋ
ಮಣ್ಣು ಮುಕ್ಕಿ, ಬಡತೊಂಡಾನ ಕೈಕಾಲು
ತಿಕ್ಕಿ ||ಕೋಲೆಣ್ಣಾ ಕೋಲ||

ವಂದೇ ಮಾತರಮ್ಮಂದು ಘೋಷಣೆ
ಮಾಡ್ಯಾನೋ ಬಿದ್ದು ಜೀವ ಹೋಯಿತು
ಆಗ ಆವಂದು ||ಕೋಲೆಣ್ಣಕೋಲ||

ದೇಶ ಸೇವೆಯ ಮಾಡಿ ಮಾತೃಭೂಮಿಗೆ
ಧಣಿ ಸುಜ್ಜೀರು ಹೇಳಿದೀ ವಾಣಿ ||ಕೋಲೆಣ್ಣಕೋಲ||[೨೬]

ಹೀಗೆ ಮೇಲೆ ತಿಳಿಸಿದ ಅನೇಕ ಹಾಡುಗಳ ಸಾಲುಗಳಲ್ಲಿ ತಮ್ಮ ದುಃಖವನ್ನು ಶ್ರೀ ವಿರೂಪಾಕ್ಷಯ್ಯ ಮತ್ತು ವಿರುಪಾಕ್ಷಪ್ಪ ಮಠಮನೆಯವರು ವ್ಯಕ್ತಪಡಿಸಿಕೊಂಡಿದ್ದಾರೆ. ಹಾಗೂ ಯುವಕರಿಗೆ ದೇಶ ಪ್ರೇಮದ ಕಿಚ್ಚು ಹೆಚ್ಚಿಸುವಲ್ಲಿ ಈ ಹಾಡುಗಳು ಮಹತ್ವದ ಸ್ಥಾನಗಳನ್ನು ಪಡೆದುಕೊಂಡಿದೆ. ದೇಶಕ್ಕಾಗಿ ಹೋರಾಡಿದ ಮಹಾನ್ ನಾಯಕರ ಹೆಸರುಗಳನ್ನು ಹಾಡುಗಳ ಸಾಲಿನಲ್ಲಿ ಸೇರಿಸಿ ಅವರ ಧೈರ್ಯ, ಸಾಹಸ, ತ್ಯಾಗ, ಬಲಿದಾನಗಳನ್ನು ತಿಳಿಸುತ್ತಾ ತಮ್ಮ ಸ್ವಾತಂತ್ರ್ಯ ಪ್ರೇಮದ ಹಂಬಲವನ್ನು ಅನೇಕ ಹಾಡುಗಾರರು ವ್ಯಕ್ತಪಡಿಸಿಕೊಂಡಿದ್ದಾರೆ.

## ೪.೮. ಕಥೆಗಳು

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಮ್ಮ ಸಾಹಿತಿಗಳು ಅನೇಕ ಕಥೆ, ಕಾವ್ಯ, ಕಾದಂಬರಿಗಳನ್ನು ಬಳಸಿಕೊಂಡು ಹೋರಾಟದ ಸ್ವರೂಪವನ್ನು ತೀವ್ರಗೊಳಿಸುವಲ್ಲಿ ನಡೆದ ಘಟನೆಗಳನ್ನು ದಾಖಲಿಸುವಲ್ಲಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಿದ್ದಾರೆ. ಅದರಲ್ಲೂ ಸಣ್ಣ ಕಥೆಗಳು ಅತ್ಯಂತ ಅಲ್ಪಸಮಯದಲ್ಲಿ ಜನಸಾಮಾನ್ಯರ ಭಾಷೆಯಲ್ಲಿ ಅವರಿಗೆ ಅನುಕೂಲವಾಗುವ ಸ್ಥಳದಲ್ಲಿ ವಿವರಿಸಿ ಹೇಳುವ ನಮ್ಮ ಜಾನಪದ ಕಥೆಗಳಂತೆ ವಿಮೋಚನಾ ಹೋರಾಟದ ಕಥೆಗಳೂ ಸಹ ಜನಪ್ರಿಯತೆಯನ್ನು ಪಡೆದು ಕೊಂಡಿವೆ. ವಿಮೋಚನಾ ಹೋರಾಟಕ್ಕೆ ಸಂಬಂಧಪಟ್ಟ ಕಥೆಗಳಲ್ಲಿ ರಜಾಕಾರರ ಅಮಾನವೀಯ ಕೃತ್ಯಗಳು, ಹಿಂಸೆಗೊಳಗಾದ ಜನರ ಆಕ್ರಂಧನಗಳು ಇವುಗಳಿಂದ ಬೇಸತ್ತ ಜನರು ರಜಾಕಾರರಿಂದ ಬಿಡುಗಡೆಗೊಳ್ಳಲು ನಡೆಸಿದ ಹೋರಾಟಗಳು ಇವೆಲ್ಲವುಗಳು ಕಥಾರೂಪದಲ್ಲಿ ಮೈತಾಳಿ ಪ್ರಸ್ತುತ ಅಧ್ಯಯನದಲ್ಲಿ ಕಥೆ, ಕಾದಂಬರಿ, ತತ್ವಪದಗಳು ಆಕರ ಸಾಹಿತ್ಯವಾಗಿ ಬಳಕೆಗೆ ಬಂದಿವೆ. ತತ್ವಪದಕಾರರೂ ಅನೇಕ ಹಾಡುಗಳಲ್ಲಿ ಹಾಡಿ ಹೊಗಳಿದ್ದಾರೆ. ಶರಣರು, ಸಂತರು, ಸೂಫಿಗಳು ಮುಂತಾದವರು ಇದಕ್ಕೆ ಪ್ರೇರಕರಾದರು. ಇಲ್ಲಿನ ಸಂಸ್ಕೃತಿ ಕುರಿತು ಕಪಟರಾಳ ಕೃಷ್ಣರಾಯರು ಕತ್ತಲೆಯಲ್ಲಿ ಬೆಳಕು ಶಿವಲೆಂಕರು ಬರೆದ ಕಥೆಗಳು ನಾವು ಯಾವ ರೀತಿ ಒಬ್ಬ ಸಾಮಾನ್ಯ ಮನುಷ್ಯನ ಅನೇಕ ಸ್ವಾರ್ಥಗಳಿಂದ ವೈರಿ ಆಗುತ್ತಿದ್ದಾರೆ ಎಂಬುದನ್ನು ಕಥೆ ಮೂಲಕ ಹೆಣೆದರು. ಆದರ್ಶ ಕಥೆಯಲ್ಲಿ ನಗರ ಕೃಷ್ಣಾಚಾರ್ಯರು ವ್ಯಕ್ತಿಗಳು ಹೇಗೆ ಮೋಸ ಹೋಗುತ್ತಾರೆ ಎಂಬುದನ್ನು ಚಿತ್ರಿಸಿದ್ದಾರೆ. ಜಯತೀರ್ಥರಾಜ ಪುರೋಹಿತ "ಸಯ್ಯಿದಾಸುಮತಿಯಾದಳು" ಎಂಬ ಕಥೆ ಮುಸ್ಲಿಂ ಹಿಂದೂ ಆಗಿ ಇಲ್ಲಿ ಹೇಗೆ ಅನಾಥಳಾದಳು ಎಂಬುದನ್ನು ಹೆಣೆದಿದ್ದಾರೆ.

ಶಾಂತರಸರ ಕಥೆ, ಕಾದಂಬರಿಗಳಲ್ಲಿ ರಜಾಕಾರರ ಕುರಿತು ಉಲ್ಲೇಖ ಬರುತ್ತದೆ. ಹಳ್ಳಿಗಳನ್ನು ಕೇಂದ್ರವಾಗಿಟ್ಟುಕೊಂಡು ಇಲ್ಲಿ ಜನರ ಸ್ಥಿತಿಗತಿಗಳನ್ನು ಕುರಿತು ದಾಖಲೆ ಮಾಡುತ್ತಾರೆ. 'ಬಾಡೇಸಾಬ

ಪುರಾಣ', 'ಹುರಿದ ಬದುಕು' ಇಲ್ಲಿ ವ್ಯಕ್ತವಾಗಿದೆ. ಅದರಂತೆ 'ಸ್ವಾತಂತ್ರ್ಯವೀರ', 'ನಾಯಿ ಮತ್ತು ಪಿಂಚಣಿ' ಕಥೆಗಳು ರಾಜಶೇಖರ ನಿರಮಾನ್ವಿಯವರ 'ವೃತ್ತಕಥೆ' ಸಂಪೂರ್ಣ ರಜಾಕಾರರ ಕುರಿತು ಬರೆದವುಗಳಾಗಿವೆ. ಇವರಲ್ಲದೇ ಲಂಕೇಶರ 'ದಾಳಿ', ಮಾಸ್ತಿ ವೆಂಕಟೇಶರ 'ಸುಶೀಲಾ ರಜಾಕಾರ' ಕಥೆಗಳು ಸಹ ಬರೆದದ್ದು ನೋಡಿದರೆ ಈ ವಿಮೋಚನಾ ಹೋರಾಟ ಹೇಗೆ ಸಾಹಿತ್ಯಕ್ಕೆ ಪೂರಕವಾಗಿತ್ತು ಎಂಬುದನ್ನು ನಾವು ತಿಳಿದುಕೊಳ್ಳಬಹುದು. ಚಂದ್ರಕಾಂತ್ ಕುಸನೂರ, ಚನ್ನಣ್ಣ ವಾಲೀಕಾರ, ಗೀತಾ ನಾಗಭೂಣ, ಬಿ.ಟಿ.ಲಲಿತಾನಾಯಕ್ ಇವರ ಕಾದಂಬರಿಗಳು ಉಲ್ಲೇಖನೀಯವೂ ಆಗಿವೆ. ಅದರಂತೆ ವಿಮೋಚನಾ ಹೋರಾಟದ ಕುರಿತು ಆಧುನಿಕ ಕವಿಗಳಾದ ಅಲ್ಲಮಪ್ರಭು ಬೆಟ್ಟದೂರ, ಅರುಣ ನರೇಂದ್ರ, ಗವಿಸಿದ್ಧ ಎನ್.ಬಳ್ಳಾರಿ, ಕೆ.ಬಿ.ಬ್ಯಾಳಿ, ಎಂ.ಜಿ.ಬಿರಾದಾರ, ಡಾ. ಬಸವರಾಜ ಸಬರದ, ನಲವಡಿ ಶ್ರೀಕಂಠಶಾಸ್ತ್ರಿ ಮುಂತಾದ ಕವಿಗಳು ತಮ್ಮದೇ ಆದ ರೀತಿಯಲ್ಲಿ ಕಾವ್ಯ ಬರೆದು ಸ್ಪಷ್ಟಪಡಿಸಿದ್ದಾರೆ. ಕಥೆ, ಕವನ, ಕಾದಂಬರಿ, ನಾಟಕ ಹಾಗೂ ಇತರ ಸಾಹಿತ್ಯದ ಕ್ಷೇತ್ರದಲ್ಲಿ ವಿಮೋಚನ ಹೋರಾಟ ಮೂಡಿಬಂದಿದೆ. ಹೈದರಾಬಾದ್ ಕರ್ನಾಟಕದ ಜನತೆಯ ಬಗ್ಗೆ ಅಧ್ಯಯನ ಮಾಡಿದ ಡಾ. ಬಿ.ಸಿ.ಮಹಾಬಲೇಶ್ವರಪ್ಪ 'ಹೈದ್ರಾಬಾದ್ ಕರ್ನಾಟಕದ ರಾಜಕೀಯ ಚಳುವಳಿಗಳು' ರಾಮಣ್ಣ ಹವಳೆ ಅವರ 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ', ಡಾ. ವೀರಣ್ಣ ದಂಡೆ ಅವರ 'ಹೈದ್ರಾಬಾದ್ ಸಂಸ್ಥಾನ ವಿಮೋಚನಾ ಚಳುವಳಿ', ಡಾ.ರಂಗರಾಜ ವನದುರ್ಗ ಅವರ 'ಹೈದ್ರಾಬಾದ್ ಸಂಸ್ಥಾನ ಸ್ವಾತಂತ್ರ್ಯ ಸಂಗ್ರಾಮದ ಶಿಬಿರಗಳು', ಶಿರೂರು ವೀರಭದ್ರಪ್ಪನವರ 'ಭಾರತ ಸ್ವಾತಂತ್ರ್ಯಕ್ಕೆ ಕೊಪ್ಪಳ ನಾಡಿನ ಕೊಡುಗೆ' ಮುಂತಾದ ಪುಸ್ತಕಗಳು ಹೈದ್ರಾಬಾದ್ ನಿಜಾಂ ಹಾಗೂ ರಜಕಾರರ ದೌರ್ಜನ್ಯಗಳನ್ನು ಜನತೆಗೆ ತಿಳಿಸಲು ಮಾಧ್ಯಮ ರೂಪತಾಳಿದೆ. ರಜಾಕಾರರ ಹೋರಾಟ ಮುಗಿಯುವವರೆಗೂ ಸಾಂಸ್ಕೃತಿಕ ನೆಲೆಯಲ್ಲಿ ಕಲಬುರ್ಗಿ ಜಿಲ್ಲೆಯ ಹೋರಾಟ ಪ್ರಧಾನ ಪಾತ್ರವಹಿಸುತ್ತದೆ. ಹೈದ್ರಾಬಾದ್ ಕರ್ನಾಟಕದಲ್ಲಿ ಕಲಬುರ್ಗಿ ಜಿಲ್ಲೆಯ ಕೊಡುಗೆ ಅಪಾರ. ನಾವು ಕಾಣುವ ಕಥೆ, ಕಾವ್ಯ, ಕಾದಂಬರಿ, ಬುಲಾಯಿ ಹಾಡು, ಜೀ ಜೀ ಪದ ಹಾಗೂ ಲಾವಣಿ ಹಾಡುಗಳು ಒಂದು ರೀತಿಯಿಂದ ಶ್ರವಣ ಮಾಧ್ಯಮ ಮೂಲಕ ಪ್ರಭಾವವನ್ನು ಬೀರಿದರೆ. ಪತ್ರಿಕೆಗಳು ಅಕ್ಷರಗಳ ಮೂಲಕ ಪ್ರಭಾವ ಬೀರಿದವು. ಪತ್ರಿಕೆಗಳು ಹೇಗೆ ಸಮೂಹದ ನಡುವೆ ಸ್ಪಂದಿಸುತ್ತವೆಯೋ ಹಾಗೆ ಈ ಸಾಹಿತ್ಯಿಕ ಹಾಡುಗಳು ಕೂಡ ಜನ ಸಮೂಹದೊಂದಿಗೆ ಸಂವಹನ ಮಾಡುತ್ತಾ ಬಂದಿರುವುದು ಒಂದು ಐತಿಹಾಸಿಕ ಸತ್ಯ ಸಂಗತಿ. ಸಾಹಿತ್ಯ ಪ್ರತಿಬಿಂಬಕವಾಗಿ ಹೈದ್ರಾಬಾದ್ ಸಂಸ್ಥಾನದ ರಾಜಕೀಯ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕುರಿತು ಎಚ್ಚರಿಕೆಯನ್ನು ನೀಡುವಲ್ಲಿ ಈ ಸಮೂಹ ಮಾಧ್ಯಮಗಳು ಪ್ರಮುಖ ಪಾತ್ರವಹಿಸಿವೆ.

**ಅಡಿಟಿಪ್ಪಣಿಗಳು**

೧. ವಸಂತ ಕುಷ್ಟಗಿ, **ಹೈದ್ರಾಬಾದ್ ಕನ್ನಡ ಪತ್ರಿಕೋದ್ಯಮದ ಇತಿಹಾಸ** (೧೯೫೬ರವರೆಗೆ) 'ಇತಿಹಾಸ ದರ್ಶನ', ಪು.೧೮೧.

೨. ದೇಸಾಯಿ ವಿ.ಎಚ್., **ಹೈದ್ರಾಬಾದ್ ವಿಮೋಚನಾ ಹೋರಾಟ ಸ್ಪೂರ್ತಿತಂದಿದೆ,** 'ದಿ ಡೆಮೊಕ್ರಾಟಿಕ್', ಸಂಯುಕ್ತ ಕರ್ನಾಟಕ ದಿನಪತ್ರಿಕೆ, ೧೮ನೇ ಸೆಪ್ಟೆಂಬರ್ ೧೯೯೮.

೩. ಅದೇ

೪. ಗೋಪಾಲರಾವ್, **ಹೈದ್ರಾಬಾದ್ ವಿಮೋಚನಾ ಸಂಘರ್ಷ,** ಪು.೧೮೫.

೫. ಅದೇ,

೬. ಪಾಟೀಲ್ ಎಚ್.ಎಸ್.(ಸಂ), **ವಿಮೋಚನೆ (ಕೊಪ್ಪಳ ಜಿಲ್ಲೆ),** ಪು.೩

೭. ಮಣ್ಣೂರ ಎಸ್.ಆರ್., ಸಂದರ್ಶನ, ದಿ.೧೧.೧೨.೨೦೦೧, ಕಲಬುರ್ಗಿ

೮. ಸಂಯುಕ್ತ ಕರ್ನಾಟಕ ದಿನಾಂಕ ೧೭.೯.೧೯೯೮, ಪು. ೧ ರಿಂದ ೩

೯. ಪಾಟೀಲ್ ಎಚ್.ಎಸ್.(ಸಂ), ಹಾಗೂ ಇತರರು, **ವಿಮೋಚನೆ** (ಕೊಪ್ಪಳ ಜಿಲ್ಲೆ), ೧೯೯೮, ಪು.೪೨

೧೦. ಚನ್ನಣ್ಣಗೌಡ, **ಜೀಪದಗಳು ವಿಮೋಚನೆ,** ಎಚ್.ಎನ್.ಪಾಟೀಲ್(ಸಂ), ಪು.೨೬

೧೧. ವಿಮೋಚನೆ, (ಕೊಪ್ಪಳ ಜಿಲ್ಲೆ) **ಹೈದರಾಬಾದ್ ವಿಮೋಚನಾ ಹೋರಾಟದ ಕಥೆ,** ಪಾಟೀಲ ಎಚ್.ಎಸ್. ಹಾಗೂ ಇತರರು(ಸಂ), ೧೯೯೯, ಪು.೪೧

೧೨. ಅದೇ, ಪು.೪೨

೧೩. ನಲವಡಿ ಶ್ರೀಕಂಠಶಾಸ್ತ್ರಿ(ಲೇ), **ಹೈದರಾಬಾದ್ ರಜಾಕಾರರ ಲಾವಣಿ,** ೧೯೯೮, ಪು.೩

೧೪. ಅದೇ, ಪು.೮

೧೫. ಅದೇ, ಪು.೧೧

೧೬. ಬಸವರಾಜ ಪೋಲಿಸ ಪಾಟೀಲ(ಲೇ), **ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ,** ೨೦೦೧, ಪು.೨೩೧-೨೩೪

ಅಧ್ಯಾಯ ೫

# ಜಿಲ್ಲೆಯ ವಿಮೋಚನಾ ಹೋರಾಟದ ರೂವಾರಿಗಳು

ಭಾರತ ೧೯೪೭ ಅಗಸ್ಟ್ ೧೫ರಂದು ಸ್ವಾತಂತ್ರ್ಯ ಪಡೆದು, ಸಂಭ್ರಮ ಸಂತೋಷದಲ್ಲಿ ತೊಡಗಿತ್ತು. ಹೈದರಾಬಾದ್ ಪ್ರಾಂತ್ಯದ ಪ್ರಜೆಗಳಿಗೆ ಆ ಸ್ವಾತಂತ್ರ್ಯದ ಬೆಳಕು ಹರಿಯಲಿಲ್ಲ. ಅವರು ತಾವು ನಿರೀಕ್ಷಿಸಿದಂತೆ ಮುಕ್ತಿಗೊಳ್ಳಲಿಲ್ಲ. ನಿಜಾಮ ತಾನೇ ಸರ್ವಾಧಿಕಾರಿ ಎಂದೂ, ಹೈದರಾಬಾದ್ ಪ್ರಾಂತ್ಯವನ್ನು ತನ್ನದೇ ಆದ ಸ್ವತಂತ್ರ ಸಂಸ್ಥಾನವೆಂದೂ ಸ್ವಘೋಷಿಸಿಕೊಂಡನು. ಹೈದರಾಬಾದ್ ಕರ್ನಾಟಕದ ಜನತೆಗೆ ಇದು ಭಯವನ್ನು ಹುಟ್ಟಿಸಿತಲ್ಲದೇ ಭಾರತದ ಒಕ್ಕೂಟ ವ್ಯವಸ್ಥೆಗೆ ಈ ಒಂದು ಸಂಸ್ಥಾನ ಸವಾಲಾಗಿ ಪರಿಣಮಿಸಿತ್ತು. ಹೈದರಾಬಾದ್ ಕರ್ನಾಟಕದ ಭಾಗಗಳಲ್ಲಿ ನಿಜಾಂ ಮತ್ತು ರಜಾಕಾರರ ವಿರುದ್ಧ ಹೋರಾಟ ಆರಂಭವಾಯಿತು. ಸ್ವಾಮಿ ರಮಾನಂದ ತೀರ್ಥರಂತ ಅನೇಕ ಹಿರಿಯರು ಈ ಹೋರಾಟಕ್ಕೆ ಬೆನ್ನೆಲುಬಾಗಿ ನಿಂತು ಹೋರಾಡಲು ಮುಂದೆ ಬಂದರು.

ರಜಾಕಾರರ ಕ್ರೂರ ನೀತಿಯನ್ನು ಇಲ್ಲಿನ ಜನ ಒಪ್ಪುತ್ತಿರಲಿಲ್ಲ. ಅಷ್ಟೇ ಅಲ್ಲದೆ ಅವರ ದಬ್ಬಾಳಿಕೆಯನ್ನು ಖಂಡಿಸಲು ಜನತೆ ಹೆದರುತ್ತಿದ್ದರು. ಏಕೆಂದರೆ ಅವರ ವಿರುದ್ಧ ತಿರುಗಿ ಬೀಳುವ ಸಾಮರ್ಥ್ಯ ಅವರಲ್ಲಿರಲಿಲ್ಲ. ಆದರೂ ಇಲ್ಲಿನ ನಾಯಕರು ಬ್ರಿಟಿಷರ ಹಾಗೂ ನಿಜಾಮರ ಆಳ್ವಿಕೆಯನ್ನು ಈಗಾಗಲೇ ವಿರೋಧಿಸಿದ್ದರು. ಹೈದರಾಬಾದ್ ಪ್ರಾಂತ್ಯದ ಜನರು ಎದುರೋತ್ತರ ಕೊಡದೇ, ನಿಜಾಂನ ಕೆಲಸ ಮಾಡಬೇಕಿತ್ತೇ ವಿನಃ ಯಾವ ತೊಂದರೆ ಅನುಭವಿಸಲು ಸಿದ್ಧರಿರಲಿಲ್ಲ.

ಅನೇಕ ಮಹಿಳೆಯರ ಮೇಲೆ ರಜಾಕಾರರು ಅತ್ಯಾಚಾರ ಮಾಡತೊಡಗಿದರು. ಮನೆ, ಒಡವೆ, ಹಣ ಲೂಟಿಗಳಾದವು. ರಜಾಕಾರರು ಇಲ್ಲಿರುವ ಸಂಪತ್ತು ದೋಚಿಕೊಳ್ಳುತ್ತಿದ್ದರು. ಹೈದರಾಬಾದ್ ಪ್ರಾಂತ್ಯದಲ್ಲಿ ಜನಸಾಮಾನ್ಯರನ್ನು ಮುಕ್ತವಾಗಿರಲು ಬಿಡುತ್ತಿರಲಿಲ್ಲ. ಇಲ್ಲಿ ಏನೇ ಕಾರ್ಯ ಮಾಡಿದರೂ ನವಾಬನ ಒಪ್ಪಿಗೆ ಪಡೆದೇ ಮಾಡಬೇಕಿತ್ತು. ಇಂತಹ ಸಂದಿಗ್ಧತೆಯಲ್ಲಿ ಸಿಲುಕಿದ ಜನತೆಯ ಜೀವನ ಮುಳ್ಳು ತಂತಿಯ ಮೇಲೆ ಹಾಸಿದ ಬಟ್ಟೆಯ ಸ್ಥಿತಿಯಂತಾಗಿತ್ತು. ಅನಿವಾರ್ಯವಾಗಿ ಇಂತಹ ಸಂದರ್ಭದಲ್ಲಿ ಅಲ್ಲಿನ ಜನರು ನಿಜಾಂನ ಅಪ್ಪಣೆ ಪಡೆದು ತಮ್ಮ ಸಭೆ ಸಮಾರಂಭಗಳನ್ನು ಮಾಡಿಕೊಳ್ಳುತ್ತಿದ್ದರು.

ನಿಜಾಂ ವಿರುದ್ಧ ಮಾತುಗಳಾಡಿದರೆ ನಾಲಿಗೆಯನ್ನು ಕತ್ತರಿಸುವುದು, ಕೇಳಿದರೆ ಕಿವಿಯನ್ನು ಕೇಳದಂತೆ ಮಾಡುವುದು, ಇಂತಹ ವ್ಯವಸ್ಥೆಯನ್ನು ರಜಾಕಾರರು ಈ ಭಾಗದ ಜನರಿಗೆ ತಂದೊಡ್ಡಿದರು. ಎಲ್ಲಿನೋಡಿದರಲ್ಲಿ ಅತ್ಯಾಚಾರ, ದಬ್ಬಾಳಿಕೆಯನ್ನು ಕಂಡ, ಅನೇಕ ಹಿರಿಯ ದೇಶಪ್ರೇಮಿಗಳು ಒಂದೆಡೆ ಯೋಚಿಸಿ, ಗುಪ್ತವಾಗಿ ಹೋರಾಟಕ್ಕೆ ಇಳಿದರು. ಈ ಹೋರಾಟ ಸಾರ್ವತ್ರಿಕವಾಯಿತು. ಈ ಸಾರ್ವತ್ರಿಕ ಹೋರಾಟದಲ್ಲಿ ಎಲ್ಲರನ್ನು ಒಂದುಗೂಡಿಸುವ ಕೆಲಸವನ್ನು ಪ್ರಮುಖವಾಗಿ ಹೋರಾಟಗಾರರು ಮಾಡಿದರು. ಅನೇಕ ವರ್ಷಗಳಿಂದ ಆಳ್ವಿಕೆ ಮಾಡಿಸಿಕೊಂಡ ಜನರಿಗೆ ಇದು ಸಹಿಸದಾಯಿತು. ನಾಡಿನ ಮುಕ್ತಿಗಾಗಿ ಹಾತೊರೆಯಲು ಪ್ರಯತ್ನಿಸಿದರು.

ನಿಜಾಮನು ಸಂಪೂರ್ಣ ರಜಾಕಾರರ ಕೈಗೊಂಬೆಯಾಗಿ ಪರಿವರ್ತನೆಗೊಂಡಿದ್ದ. ರಜಾಕಾರರು ಹೇಳಿದಂತೆ ಕೇಳುತ್ತಿದ್ದನು. ರಜಾಕಾರರು ನಿಜಾಮನನ್ನು ದೇವರೆಂದು ಹೇಳಿ, ಹೈದರಾಬಾದ್ ಪ್ರಾಂತ್ಯವನ್ನು ಸ್ವಾತಂತ್ರ್ಯ ಭಾರತಕ್ಕೆ ಸೇರಿಸದೆ ಪ್ರತ್ಯೇಕ ಸಾಮ್ರಾಜ್ಯ ಮಾಡುವುದಾಗಿ ನಿಜಾಮನಿಗೆ ಹೇಳಿದರು. ಇವುಗಳನ್ನೆಲ್ಲ ನೋಡಿಕೊಂಡ ಹೈದರಾಬಾದ್ ಕರ್ನಾಟಕ ಚಳುವಳಿಯ ನಾಯಕರು ಜನರಲ್ಲಿ ಜಾಗೃತಿ ಮೂಡಿಸಿದರು. ಗುಪ್ತವಾಗಿ ಅನೇಕ ರೀತಿಯ ಸಲಹೆ, ಸೂಚನೆಗಳನ್ನು ಜನರಿಗೆ ನೀಡುತ್ತಿದ್ದರು. ಈ ಭಾಗದ ಯುವಕರನ್ನು ಒಂದುಗೂಡಿಸಿ ಹಿರಿಯರು ಸಲಹೆ ಸೂಚನೆ ನೀಡಿದ್ದರೂ ಆಗ ಅನೇಕ ಭಾಗಗಳಲ್ಲಿ ಗಡಿಶಿಬಿರಗಳು ಹುಟ್ಟಿಕೊಂಡವು. ಸಂಘ-ಸಂಸ್ಥೆಗಳು ಒಳಗೊಳಗೆ ಇನ್ನಿತರ ರೀತಿಯ ಹೋರಾಟ ಕುರಿತು ಚಿಂತನೆ ಮಾಡಲು ಪ್ರಾರಂಭಿಸಿದವು. ಹಬ್ಬ-ಉತ್ಸವ, ಜಾತ್ರೆಗಳ ಸಂದರ್ಭದಲ್ಲಿ ಕೂಡಾ ವಿಮೋಚನಾ ಹೋರಾಟದ ಕ್ರಾಂತಿ ಬಿತ್ತುತ್ತಿದ್ದರು. ಅದರಲ್ಲಿ ರಾಷ್ಟ್ರ ಪ್ರೇಮದ ವಿಚಾರಗಳು ಜನತೆಗೆ ತಲುಪುವಂತೆ ಶಿಬಿರಗಳ ಕಾರ್ಯಕರ್ತರು ಗುಪ್ತ ಸಭೆಗಳನ್ನು ನಡೆಸಿದರು. ಇದೇ ಹೊತ್ತಿಗೆ ಅನೇಕ ಕೈ ಬರಹದ ಹಾಗೂ ಮುದ್ರಿತ ಪತ್ರಿಕೆಗಳು ಹೊರ ಬಂದವು. ಪತ್ರಿಕೆಗಳಿಂದ ರಾಷ್ಟ್ರಪ್ರೇಮದ ವಿಚಾರಗಳನ್ನು ತಿಳಿದುಕೊಂಡ ಈ ಯುವಕರು ಹೋರಾಟಕ್ಕೆ

ಮುನ್ನುಗಿದ್ದರು. ಹೀಗೆ ಹೋರಾಟಗಾರರ ಸಮೂಹ ಒಂದೇ ಕಡೆ ಸೇರಲು ಆರಂಭವಾಯಿತು. ನೂರಾರು ಕಾರ್ಯಕರ್ತರು ಸ್ವಯಂ ಪ್ರೇರಣೆಯಿಂದ ಈ ಹೋರಾಟದಲ್ಲಿ ಧುಮುಕಿದರು. ಅಲ್ಲದೇ ಅಸಂಖ್ಯಾತ ವಿದ್ಯಾರ್ಥಿಗಳು ತಮ್ಮ ಶಾಲೆ-ಕಾಲೇಜುಗಳಿಗೆ ಶರಣು ಹೊಡೆದು, ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ನಾಡಿನ ಮುಕ್ತಿಗಾಗಿ ಹೋರಾಟಕ್ಕೆ ಮುಂದೆ ಬಂದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದಂಥ ನಾಯಕರುಗಳನ್ನು ಎರಡು ರೀತಿಯಾಗಿ ವಿಂಗಡಿಸಬಹುದು

೧. ಮಂದಗಾಮಿಗಳು (೧೮೮೫-೧೯೦೫) ೨. ತೀವ್ರಗಾಮಿಗಳು (೧೯೦೫-೧೯೧೯) ಎಂದು ವಿಂಗಡಿಸಲಾಗಿದೆ. ಅದೇ ರೀತಿಯಾಗಿ ಮಂದಗಾಮಿಗಳಲ್ಲಿ ಡಬ್ಲ್ಯೂ.ಸಿ.ಬ್ಯಾನರ್ಜಿ, ದಾದಾಬಾಯಿ ನವರೋಜಿ, ಫಿರೋಜ್ ಷಾ ಮೇಹ್ತಾ ಪಿ.ಆನಂದಾಚಾರ್ಲು, ಸುರೇಂದ್ರನಾಥ ಬ್ಯಾನರ್ಜಿ, ಸಿ. ಶಂಕರನ್ ನಾಯರ್, ರಮೇಶ ಚಂದ್ರದತ್ತ, ಗೋಪಾಲಕೃಷ್ಣ ಗೋಖಲೆ, ಮಹಾದೇವ ಗೋವಿಂದ ರಾನಡೆ, ಗಾಂಧಿ ಮುಂತಾದವರನ್ನು ಮಂದಗಾಮಿಗಳಾಗಿದ್ದರು. ಬಣದ ನಾಯಕರೆಂದು ಕರೆದರು. ಹಾಗೂ ತೀವ್ರಗಾಮಿಗಳೆಂದು ಲಾಲಾಲಜಪತರಾಯ್, ಬಾಲಗಂಗಾಧರತಿಲಕ, ಹಾಗೂ ಬಿಪಿನ್ ಚಂದ್ರಪಾಲರನ್ನು ಕರೆದರು. ಇದರಂತೆ ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿಯೂ ಎರಡು ಪಂಗಡಗಳು ಹುಟ್ಟಿಕೊಂಡವು. ಸ್ವಾಮಿ ರಮಾನಂದ ತೀರ್ಥರು ಮಂದಗಾಮಿ ಹಾಗೂ ಗಾಂಧೀಜಿಯವರ ಮಾರ್ಗದರ್ಶನದಂತೆ ಸತ್ಯಾಗ್ರಹ ಎಂಬ ಅಸ್ತ್ರ ಹಿಡಿದು ನಿಜಾಮನ ವಿರುದ್ಧ ಹೋರಾಡಿದರು. ಆದರೆ ತೀವ್ರಗಾಮಿಗಳಾಗಿ ಸರದಾರ್ ಶರಣಗೌಡ ಪಾಟೀಲ್ ಇನಾಮದರ್, ಗುರುಭೀಮರಾವ್ ಪಾಟೀಲ್, ಡಿ.ಬಿ.ಕಲ್ಮಣಕರ್, ಅಣ್ಣಾರಾವ್ ಪಾಟೀಲ, ಭೈರಪ್ಪ ಪಾಟೀಲ ಭೂಸನೂರ, ಜಗನ್ನಾಥರಾವ್ ಚಂಡ್ರಿಕಿ, ಚಂದ್ರಶೇಖರ ಪಾಟೀಲ ಮಹಾಗಾಂವ್ ಮುಂತಾದವರು ಈ ಭಾಗದ ತೀವ್ರಗಾಮಿಗಳಾಗಿ ನಿಜಾಂ ಹಾಗೂ ರಜಾಕಾರರ ಕ್ರೂರ ನೀತಿಯ ವಿರುದ್ಧ ಹೋರಾಡಿದ್ದರು. ತಮ್ಮ ಪ್ರಾಣದ ಹಂಗನ್ನು ತೊರೆದು ಹೋರಾಟದಲ್ಲಿ ತೊಡಗಿದರು. ಈ ಹೋರಾಟದಲ್ಲಿ ಅನೇಕ ಹೋರಾಟಗಾರರು ಶಸ್ತ್ರಾಸ್ತ್ರ ತರಬೇತಿ, ಬಾಂಬುಗಳ ತಯಾರಿಕೆ, ಗೆರಿಲ್ಲಾ ಯುದ್ಧ ಕಲೆಯನ್ನು ರೂಪಿಸಿಕೊಂಡು ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿ ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿದರು. ಇವರೆಲ್ಲಾ ಕಲಬುರ್ಗಿ ಜಿಲ್ಲೆಯವರೇ ಆಗಿದ್ದು, ಕೆಲವರು ಇಂದಿಗೂ ಜೀವಂತವಾಗಿದ್ದು, ಅಂದಿನ ನೈಜ ಸ್ಥಿತಿಯನ್ನು ತಿಳಿಸಲು ತುಂಬ ಉತ್ಸುಕತೆಯಿಂದ ಮುಂದಾಗುತ್ತಾರೆ. ಅವರ ಒಂದೊಂದು ರಾಷ್ಟ್ರಪ್ರೇಮದ ಮಾತುಗಳು ನಮ್ಮಂತಹ ಯುವಕರಿಗೆ ಹಾಗೂ ಮಕ್ಕಳಿಗೆ ರಾಷ್ಟ್ರಭಕ್ತಿ ಹೆಚ್ಚಿಸುವಂತೆ ಪ್ರೇರೇಪಿಸುವಲ್ಲಿ ಹೆಚ್ಚು ಸಹಕಾರಿಯಾಗಿವೆ.

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟಗಾರರ ಐತಿಹಾಸಿಕ ಚಾರಿತ್ರಿಕ ನೆಲೆಯಲ್ಲಿ ಅವರ ವ್ಯಕ್ತಿತ್ವದ ಮೂಲಕ ಸಾಧನೆ ಹೋರಾಟಗಳನ್ನು ದಾಖಲಿಸಲು ಇಲ್ಲಿ ಪ್ರಯತ್ನಿಸಿದ್ದೇನೆ. ಅವರು ಇತಿಹಾಸ ಚರಿತ್ರೆಯ ಪುಟದಲ್ಲಿ ಸೇರಿ ಅಚ್ಚಳಿಯದಂತೆ ಉಳಿಯುವುದೇ ಅನಿವಾರ್ಯ. ಆ ನಿಟ್ಟಿನಲ್ಲಿ ಇದೊಂದು ಸಣ್ಣ ಪ್ರಯತ್ನ.

## ೫.೧. ಸ್ವಾಮಿ ರಮಾನಂದ ತೀರ್ಥರು

ಭಾರತ ಸ್ವಾತಂತ್ರ್ಯ ಹೋರಾಟಗಾರರಾದ ಸ್ವಾಮಿ ರಮಾನಂದ ತೀರ್ಥರು ಹೈದರಾಬಾದ್ ಕರ್ನಾಟಕ ಕಾಂಗ್ರೆಸ್ ನಾಯಕರಾಗಿ ಹೈದರಾಬಾದ್ ವಿಮೋಚನಾ ಹೋರಾಟಕ್ಕೆ ತಮ್ಮ ಸೇವೆ ಸಲ್ಲಿಸಿ ಮೈಲುಗಲ್ಲಾದರು. ಭಾರತ ಸ್ವತಂತ್ರಗೊಂಡರೂ ಹೈದರಾಬಾದ್ ಪ್ರಾಂತ್ಯ ಭಾರತಕ್ಕೆ ವಿಲೀನಗೊಳ್ಳಲಿಲ್ಲ ಎಂಬ ಕೊರಗು ಇವರದಾಗಿತ್ತು. ದೇಶ ಸ್ವತಂತ್ರ ಹೊಂದಿದ ತಕ್ಷಣ ಈ ಭಾಗದ ನಾಯಕರು, ಅಧಿಕಾರ ಮತ್ತು ಸ್ಥಾನಗಳಿಗೊಸ್ಕರ ದೆಹಲಿಗೆ ಹೊರಟರೆ ವಿನಃ ಹೈದರಾಬಾದ್ ಕರ್ನಾಟಕ ಭಾಗದ ಜನರ ನೋವನ್ನು ಅವರು ಅರಿಯಲಿಲ್ಲ. ಅಂತಹ ಹೊತ್ತಿನಲ್ಲಿ ರಮಾನಂದ ತೀರ್ಥರು ಈ ಭಾಗದ ಜನರಿಗೋಸ್ಕರ ನಿಜಾಂನ ವಿರುದ್ಧ ಹೋರಾಡಲು ನಿಂತರು.

ಹೈದರಾಬಾದ್ ಕರ್ನಾಟಕದ ವಿಮೋಚನಾ ಹೋರಾಟದ ರೂವಾರಿ ಎಂದೆನಿಸಿಕೊಂಡಿರುವಂತಹ ಶ್ರೀರಮಾನಂದರು ಮೂಲತಃ ಬಿಜಾಪುರ ಜಿಲ್ಲೆಯ ಸಿಂದಿಗಿ ಗ್ರಾಮದವರು. ಹೈದರಾಬಾದ್ ನಿಜಾಮರ ಆಳ್ವಿಕೆಗೆ ಸೇರದ ಈ ಪ್ರದೇಶದಲ್ಲಿ ಜನಿಸಿದವರಾದರೂ ಸಹ, ರಾಷ್ಟ್ರಪ್ರೇಮ, ಅಖಂಡ ಭಾರತದ ನಿರ್ಮಾಣಕ್ಕಾಗಿ ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯದ ಕಹಳೆಯನ್ನೂದಿದರು. ಇವರ ಮೂಲ ಹೆಸರು ವೆಂಕಟೇಶ ಭವಾನ್‌ರಾವ್ ಖೇಡ್ಗೀಕರ್. ೩-೧೦-೧೯೦೩ರಲ್ಲಿ ಸಿಂದಿಗಿ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣ ಗಾಣಗಾಪೂರ ಹಾಗೂ ಸೋಲಾಪುರದಲ್ಲಿ ಆಯಿತು. ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋದರು.

ಪುಣೆಯ ತಿಲಕ ಮಹಾವಿದ್ಯಾಲಯದಲ್ಲಿ ಎಂ.ಎ.ಪದವಿ ಪಡೆದರು. ತದನಂತರ ಎಂ.ಎನ್ ಜೋಗಿ ಅವರ ಸಹಾಯಕರಾಗಿ ಕಾರ್ಯನಿರ್ವಹಿಸಿದ್ದು ಮುಂದೆ ಎಂ.ಎನ್.ಜೋಗಿ ನಿಧನರಾದ ಬಳಿಕ ಇವರು ಹಿಪ್ಪರಗಿಯ ಶಾಲಾ ಮುಖ್ಯೋಧ್ಯಾಪಕರಾದರು. ಶ್ರೀ ನಾರಾಯಣ ಸ್ವಾಮಿಗಳ ಕೈಯಿಂದ ದೀಕ್ಷೆ ಪಡೆದು ಸನ್ಯಾಸಿ ಜೀವನ ಆರಂಭಿಸಿದರು. ಆಗ ವೆಂಕಟೇಶ ಎಂಬ ಹೆಸರನ್ನು ಬದಲಿಸಿ ಮುಂದೆ ರಮಾನಂದ ತೀರ್ಥರಾದರು. ಅವರು ತಮ್ಮ ಹೊಟ್ಟೆ ಹಸಿವಿಗಾಗಿ ಎಲ್ಲ ಕಡೆ ಭಿಕ್ಷೆಗೆ ಹೋಗದೇ ಕೇವಲ ಐದು ಮನೆ ಭಿಕ್ಷೆಗೆ ಹೋಗಿ ಅಷ್ಟರಲೇ ತೃಪ್ತಿ ಪಡುತ್ತಿದ್ದರು. ಇಂತಹ ಸರಳ ವ್ಯಕ್ತಿ ರಮಾನಂದ ತೀರ್ಥರಾಗಿದ್ದರು.

ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ೨೩೫ ವರ್ಷಗಳ ಕಾಲ ಆಳಿದ ನವಾಬರಲ್ಲಿ ಕೊನೆಯ ನವಾಬನಾದ ಮೀರ ಉಸ್ಮಾನ ಅಲಿಖಾನನು ಮೂಢ ಮತಾಂಧನಾಗಿದ್ದ; ಪ್ರಜೆಗಳಿಗೆ ಮುಕ್ತ ಅವಕಾಶಕೊಡಲಿಲ್ಲ. ತಾನೇ ಎಲ್ಲವನ್ನು ನಿರ್ವಹಿಸಿ ಇಲ್ಲಿನ ಜನಗಳಿಗೆ ಹಿಂಸೆ ನೀಡುತ್ತಲಿದ್ದ. ನೋವು, ಯಾತನೆ, ಭಯ ಇಟ್ಟುಕೊಂಡ ಜನರು ಕಕ್ಕಾಬಿಕ್ಕಿಯಾಗಿ ಉಸಿರೇ ನಿಂತು ಹೋಗುವ ಪರಿಸ್ಥಿತಿ ತಲುಪಿದ್ದರು. ಇದನ್ನು ಕಂಡು ಸ್ವಾಮಿ ರಮಾನಂದ ತೀರ್ಥರಿಗೆ ಇಲ್ಲಿನ ಜನರ ವೇದನೆ ಅರ್ಥವಾಯಿತು. ಈ ಭಾಗದ ಜನತೆಗೆ ಸ್ವಾತಂತ್ರ್ಯದ ಕಲ್ಪನೆ ಮೂಡಿಸುವಲ್ಲಿ ಸ್ವಾಮಿಜೀ ಪ್ರಯತ್ನಿಸಿದರು. ಜನರಿಗೆ ಅಕ್ಷರಾಭ್ಯಾಸ ಕಲಿಸುವ ಮೂಲಕ ಧೈರ್ಯ, ವಿಶ್ವಾಸಗಳನ್ನು ತಂದುಕೊಟ್ಟರು. ದೇಶದ ಪ್ರತಿಯೊಬ್ಬ ಯುವಕನೂ ವಿದ್ಯೆಯನ್ನು ಕಲಿತು ವಿದ್ಯಾವಂತರಾಗಬೇಕೆಂಬುದೇ ಇವರ ಆಶೆಯಾಗಿತ್ತು. ಇದರ ಮೂಲಕವೇ ನಾವು ಸ್ವಾತಂತ್ರ್ಯ ಕಾಣಲು ಸಾಧ್ಯ ಎಂಬುದು ಅವರ ನಿಲುವಾಗಿತ್ತು.

ರಾಷ್ಟ್ರ ಭಕ್ತಿಯ ಮಂತ್ರವಾಗಿದ್ದ "ವಂದೇ ಮಾತರಂ" ಗೀತೆ ಹೈದರಾಬಾದ್ ಪ್ರಾಂತ್ಯದ ಭಾಗಗಳಲ್ಲಿ ವಿದ್ಯಾರ್ಥಿಗಳು ಹಾಡಿದರೆ, ಅವರನ್ನು ನಿಜಾಂ ಸರಕಾರ ಶಾಲಾ-ಕಾಲೇಜಿನಿಂದ ಡಿಬಾರ್ ಮಾಡಿ ಹೊರ ಹಾಕುತ್ತಿತ್ತು. ಶಿಕ್ಷಕರು, ಅಧಿಕಾರಿಗಳು ಹಾಡಿದರೆ ಅವರನ್ನು ನೌಕರಿಯಿಂದ ವಜಾ ಮಾಡಲಾಗುತ್ತಿತ್ತು. ಆಸಿಫ್ ಶಾಹಿ ಮನೆತನ ಅಮರವಾಗಿರಲಿ ಎಂದು ನಿಜಾಮನೇ ೧೯೧೨ರಲ್ಲಿ ಸ್ವತಃ ಒಂದು ಕವಿತೆಯನ್ನು ರಚಿಸಿದ್ದನು ಎಲ್ಲಾ ಶಾಲಾ ಮಕ್ಕಳೂ ಈ ಕವನವನ್ನು ಪ್ರಾರ್ಥನಾ ರೂಪದಲ್ಲಿ ಹಾಡಿ, ನಿಜಾಮನ ಉತ್ಕರ್ಷ ಕೋರಬೇಕೆಂದು ಆಜ್ಞೆ ಹೊರಡಿಸಲಾಗಿತ್ತು. ಆ ಕವನ ಹೀಗಿದೆ

"ನಿಜಾಮ್ -ಎಲ್ -ಮುಫ್ ಉಸ್ಮಾನ್ ಅಲೀಖಾನ್ ಅಸಿಫೆಸಾಬೇ
ಸಿರಾಜಿದೀನ್ ಇಸ್ಲಾಮೀ ಅಮೀರ್ ಮೋಮಿನಾ ತೂಹೋ
(ಓ ನಿಜಾಮನೆ! ಇಸ್ಲಾಂ ಧರ್ಮದ ಸೂರ್ಯ ನೀನಾಗಿರುವೆ ಎಲ್ಲ ಮುಸ್ಲಾಂನರ ಅಮೀರನೇ ನೀನು)[೧]

ಎನ್ನುವಂತಹ ಈ ಸರ್ವಾಧಿಕಾರ ರೂಪದ ಗೀತೆಯನ್ನು ಹೈದರಾಬಾದ್ ಕರ್ನಾಟಕದ ಜನರು ಅನಿವಾರ್ಯವಾಗಿ ಹಾಡಬೇಕಿತ್ತು. ಇದನ್ನು ಕಂಡು ರಮಾನಂದರು "ವಂದೇ ಮಾತರಂ" ಗೀತೆ ಎಲ್ಲರೂ ಹಾಡಲೇಬೇಕೆಂಬ ವಿಚಾರವನ್ನು ಜನರಲ್ಲಿ ಬಿಂಬಿಸಿದರು.

ಶ್ರೀ ರಮಾನಂದ ತೀರ್ಥರು ೧೯೩೦ರ ಹೊತ್ತಿಗೆ ಎಲ್ಲರಿಗಿಂತ ಮುಂಚೆ ಹೈದರಾಬಾದ್ ನಿಜಾಮನ ವಿರುದ್ಧ ಅನೇಕ ಸ್ವಾತಂತ್ರ್ಯದ ಪ್ರಗತಿ ಪರ ಕೆಲಸಗಳನ್ನು ಮಾಡುತ್ತಾನಿಂತರು. ಹಿಪ್ಪೆರಗಾದಲ್ಲಿಯೇ ಮೊದಲ ಹೋರಾಟದ ಕಿಚ್ಚು ಮೂಡಿಸಿದ್ದರು. ರಮಾನಂದ ತೀರ್ಥರು ಹೈದರಾಬಾದ್ ಕಾಂಗ್ರೆಸ್

ಸಂಸ್ಥೆಯ ಮೂಲಕ ಹೋರಾಟಕ್ಕೆ ಅಣಿಮಾಡಿದರು. ಹೈದರಾಬಾದ್ ಕರ್ನಾಟಕ ಪ್ರಮುಖ ಸ್ಥಳಗಳಲ್ಲಿ ಸಂಚರಿಸಿ ಅಲ್ಲಿನ ಜನತೆಯ ಸ್ಥಿತಿಯನ್ನು ವಿವರಿಸಿ ಹೋರಾಟಕ್ಕೆ ನಾಂದಿ ಹಾಡಿದರು. ರಜಾಕಾರರ ವಿರುದ್ಧ ವಿದ್ಯಾರ್ಥಿಗಳು ಹಾಗೂ ಅಧಿಕಾರಿಗಳು ನೀಡಿದ ಕರೆಯಿಂದಾಗಿ ಅನೇಕ ಹೋರಾಟಗಾರರು ಹೋರಾಟಕ್ಕೆ ಸ್ಪಂದಿಸಿದರು. ದೇಶ ಪ್ರೇಮದ ಸಲುವಾಗಿ ಹಗಲಿರುಳು ಮಹಾಶಕ್ತಿ ಉದಯವಾಯಿತು. ರಮಾನಂದರು ಮನಸ್ಸು ಮಾಡಿದರೆ ರಜಾಕಾರರನ್ನು ಅಲ್ಲೋಲ ಕಲ್ಲೋಲ ಮಾಡಬಹುದಿತ್ತು. ಆದರೆ ಮಂದಗಾಮಿಗಳಾಗಿ ಗಾಂಧಿಯಂತೆ ಸತ್ಯಾಗ್ರಹ ಶಾಂತಿ ಮೂಲಕ ಸ್ವಾತಂತ್ರ್ಯ ತರಬೇಕೆಂಬ ಹಂಬಲ ಅವರದಾಗಿತ್ತು. ಇವರ ಇಂತಹ ಸಂಘಟನಾ ಬಲವನ್ನು ಕಂಡ ನವಾಬ ಇವರನ್ನು ಜೈಲಿಗೆ ಹಾಕಿಸಿದನು. ಜೈಲಿನಲ್ಲಿಯೇ ನಿಜಾಂ ಅಧಿಕಾರಿಗಳ ವಿರುದ್ಧ ಹೋರಾಟ ಮಾಡಿದರು. ಅನೇಕ ಪತ್ರಿಕೆಗಳ ಮೂಲಕ ಜನರಿಗೆ ರಾಷ್ಟ್ರ ಪ್ರೇಮದ ಸಂದೇಶ ನೀಡಿದರು.

ಹೀಗೆ ವಿಮೋಚನಾ ಹೋರಾಟದ ಸೂರ್ಯರಾಗಿ ರಮಾನಂದ ತೀರ್ಥರು ನಿಂತರು. ಜೈಲಿನಲ್ಲಿದ್ದೇ ಜನತೆಯ ಕುರಿತು ಮುಕ್ತವಾಗಿ ಮಾತನಾಡಿದರು.

"ಯವಜನರೇ ನೆನಪಿನಲ್ಲಿಡಿ. ಕ್ರೂರ ಆಳ್ವಿಕೆಯನ್ನು ವಿರೋಧಿಸುವುದು ದೈವಾರಾಧನೆ ಇದ್ದಂತೆ, ನಾವು ಮಧ್ಯದಲ್ಲಿ ನಿಲ್ಲಿಸಿರುವ ಕೆಲಸವನ್ನು ಕೈಗೆತ್ತಿಕೊಳ್ಳಿ. ನಮ್ಮದು ಶುದ್ಧ ರಾಷ್ಟ್ರೀಯ ಹೋರಾಟ. ವಿಮೋಚನೆಗಾಗಿ ಹೋರಾಟ ಮಾಡಿ. ನಿಜಾಮನ ದಬ್ಬಾಳಿಕೆಗೆ ಗಮನ ಕೊಡಬೇಡಿ. ನಿಮ್ಮ ಆಪ್ತರು, ಹಿತೈಷಿಗಳು ಅಡ್ಡಬಂದರೂ ನಿಲ್ಲಬೇಡಿ. ಮುನ್ನುಗ್ಗುವುದೇ ನಮ್ಮದಾರಿ."[೨]

ಇವು ವಿಮೋಚನಾ ಹೋರಾಟಕ್ಕೆ ಸ್ಫೂರ್ತಿಯುತ ಮಾತುಗಳಾದವು. ಇಂತಹ ಸಂಘಟನಾ ಚತುರ ಹಾಗೂ ಹೋರಾಟದ ನೇತಾರರಾದ ವೀರಸನ್ಯಾಸಿ ರಮಾನಂದ ತೀರ್ಥರು ಸ್ವಾತಂತ್ರ್ಯ ನಂತರ ೧೯೫೨ರಲ್ಲಿ ಗುಲ್ಬರ್ಗಾ ಮತದಾರ ಸಂಘದಿಂದ ಲೋಕಸಭೆಗೆ ಆಯ್ಕೆಗೊಂಡರು. ೧೯೫೭ರಲ್ಲಿ ಮತ್ತೆ ಲೋಕಸಭೆಗೆ ಆಯ್ಕೆಯಾದ ಅವರು ೧೯೬೨ರ ನಂತರ ರಾಜಕೀಯ ಬಿಟ್ಟು ದೂರಾದರು. ಜನವರಿ ೨೨, ೧೯೭೨ ರಂದು ಕಲಬುರ್ಗಿಯಲ್ಲಿ ನಿಧನರಾದರು.

## ೫.೨. ಅಣ್ಣಾರಾವ್ ವೀರಭದ್ರಪ್ಪಾ ಪಾಟೀಲ

ಆಳಂದ ಶರಣರನಾಡು, ಇಲ್ಲಿನ ಜನತೆ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ನಿಜಾಮನ ಅನೇಕ ಕರಾರುಗಳು ಜನರಿಗೆ ಹಿಡಿಸಲಾದವು. ಈ ಗಡಿ ಶಿಬಿರಗಳಲ್ಲಿ ಆಳಂದ ತಾಲ್ಲೂಕಿನ ೩೦೦ಕ್ಕೂ ಹೆಚ್ಚು ಜನ ದೇಶ ಪ್ರೇಮಿಗಳಾಗಿ ಹೋರಾಟಕ್ಕೆ ಧುಮುಕಿದರು. ಇವರಲ್ಲಿ ಮುಖ್ಯವಾಗಿ ಪ್ರೇರಣೆ ತಂದವರೇ ಅಣ್ಣಾರಾವ್ ಪಾಟೀಲರು.

ಭೌಗೋಳಿಕವಾಗಿ ಇಂದು ಮಹಾರಾಷ್ಟ್ರರಾಜ್ಯದ ತಾಲ್ಲೂಕು ಕೇಂದ್ರವಾಗಿರುವ ಅಕ್ಕಲಕೋಟಿ ಅಂದಿನಿಂದಲೂ ಮಾನಸಿಕವಾಗಿ ಕರ್ನಾಟಕದ ಒಂದು ಅವಿಭಾಜ್ಯ ಅಂಗವಾಗಿಯೇ ಇದೆ. ಈ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮಗಳಲ್ಲಿ ಅನೇಕ ಸುಲಿಗೆ, ಕೊಲೆ, ಅತ್ಯಾಚಾರಗಳು ರಜಾಕಾರರಿಂದ ನಡೆದವು. ಇದನ್ನು ಕಂಡ ಅಣ್ಣಾರಾವ ಪಾಟೀಲರು ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ಗಡಿಭಾಗವಾದ ವಾಗ್ದರಿಗಿ ಶಿಬಿರದ ನಾಯಕರಾಗಿ ಹದಿಮೂರು ತಿಂಗಳು ಸತತ ಹೋರಾಟ ಮಾಡಿದುದಲ್ಲದೇ ಭೂಗತ ಹೋರಾಟಗಾರರಿಗೆ ಪ್ರೇರಣೆ ನೀಡಿ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡರು. ೨೫ನೇ ವಯಸ್ಸಿನಲ್ಲಿ ಸ್ವಾತಂತ್ರ್ಯ ಹೋರಾಟದ ದೀಕ್ಷೆ ತೊಟ್ಟರು. ತಮ್ಮ ಬದುಕು ಮೊದಲು ದೇಶ ಸ್ವಾತಂತ್ರ್ಯಕ್ಕಾಗಿ ಮುಡುಪಾದರೆ ಮತ್ತೊಂದೆಡೆ ಸಾಮಾಜಿಕ ಸೇವೆಗಾಗಿ ತಮ್ಮ ಜೀವನವನ್ನು ಮೀಸಲಾಗಿಸಿದರು. ಹಗಲು ರಾತ್ರಿ ಹೋರಾಟದಲ್ಲಿ ತೊಡಗಿದ್ದ ಪಾಟೀಲರು ರಜಾಕಾರರ ಹಿಂಸೆಗಳಿಗೆ ಪ್ರತಿ ಉತ್ತರಕೊಟ್ಟರು. ಇವರು ಅನೇಕ ಸೈನಿಕ ಗೆಳೆಯರನ್ನು ಹೊಂದಿದ್ದರು. ಗೋಪಾಲದೇವಶಾಸ್ತ್ರಿ, ಗುರುನಾಥರಾವ್ ಡಗೆ, ದಿಂಗಬರ ಕತಾರ, ಶಂಕರಶೆಟ್ಟಿ ಪಾಟೀಲ್ ಮತ್ತು ಮಾರುತಿರಾವ್ ಬುಲ್‌ಬುಲಿಯವರು ಮುಂತಾದವರು ಒಂದುಗೂಡಿ ಸೈನಿಕ ಬಳಗ ಒಂದನ್ನು ಕಟ್ಟಿಕೊಂಡರು. ಅವರೆಲ್ಲ ಸೇರಿ ರಜಾಕಾರರ ಕ್ಯಾಂಪಗಳ ಮೇಲೆ ದಾಳಿ ಮಾಡಿದರು. ಕರೋಡಗಿ ನಾಕಾದ ಮೇಲೆ ದಾಳಿಮಾಡಿ ನಿಜಾಮ ಅಧಿಕಾರಿಗಳ ಕಾಗದ ಪತ್ರಗಳನ್ನು ಸುಟ್ಟುಬಿಟ್ಟರು. ಅಣ್ಣಾರಾವ್ ವೈರಿಗಳಿಗೆ ಸಿಂಹ ಸ್ವಪ್ನವಾಗಿದ್ದ. ತನ್ನ ಸೇನಾನಿಗಳೊಂದಿಗೆ ಪಠಾಣರ ಕ್ಯಾಂಪುಗಳ ಮೇಲೆ ದಾಳಿ ಮಾಡುತ್ತಿದ್ದ. ಹೋರಾಟದಲ್ಲಿ ಎದುರಾದವರಿಗೆ ಹೊಡೆದು ಸದೆ ಬಡೆಯುತ್ತ, ಶರಣಾದವರಿಗೆ ಕರುಣೆ ತೋರುತ್ತ, ಹಗಲು-ರಾತ್ರಿಯೆನ್ನದೆ ಕುದುರೆ ಏರಿ ಊರೂರು ಸಂಚರಿಸಿ ಜನರಿಗೆ ಧೈರ್ಯ ಹೇಳಿದ. ನೊಂದವರ ಕಣ್ಣೀರು ಒರೆಸಿದ, ಕವಿದ ಕತ್ತಲೆಗೆ ಬೆಳಕಾದ, ಇವರ ಸಾಹಸಮಯ ಹೋರಾಟದಿಂದ ವಾಗ್ದರಿ ಶಿಬಿರವು "ಅಣ್ಣಾರಾಯನಶಿಬಿರ" ಎಂದು ಹೆಸರು ಪಡೆಯಿತು. 'ಪಾಟೀಲವೆಂಬ ಅಡ್ಡಹೆಸರು ಮರೆಯಾಗಿ "ಶಿಬಿರದ ಅಣ್ಣಾರಾಯ" ಎಂದು ಜನರ ಮನದಲ್ಲಿ ಅಚ್ಚಳಿಯದ ವ್ಯಕ್ತಿಯಾದರು.

ಗೋಪಾಲದೇವಶಾಸ್ತ್ರಿ ಅವರಿಗೆ ಗುಂಡು ತಗುಲಿತು. ಆಗ ಅನಿವಾರ್ಯವಾಗಿ ಅತ್ಯಂತ ಕಿರಿಯ ಉತ್ಸಾಹಕವಾದ ವ್ಯಕ್ತಿ ಬೇರೊಬ್ಬರಿಲ್ಲ ಎಂಬುದನ್ನು ಅರಿತುಕೊಂಡು ಆ ಶಾಸ್ತ್ರಿಗಳು ಅಣ್ಣಾರಾಯರಿಗೆ ವಾಗ್ದರಿಗಿ ಶಿಬಿರದ ಜವಾಬ್ದಾರಿಯನ್ನು ವಹಿಸಿದ್ದರು. ಶಿಬಿರಗಳ ಕಾರ್ಯಗಳನ್ನು ನೋಡುತ್ತ, ಇವರು ಬಾಂಬು ತಯಾರಿಕೆ ತರಬೇತಿಯನ್ನು ಪಡೆದುಕೊಂಡರು. ಅನೇಕ ಶಸ್ತ್ರಾಸ್ತ್ರಗಳ ತರಬೇತಿ ಹೊಂದಿ ರಜಾಕಾರರ ವಿರುದ್ಧ ಹೋರಾಡಿದರು. ನಿಜಾಮನ ವಿರುದ್ಧ ಇವರು ಮಾಡಿದ ಭಾಷಣ

ರೊಮಾಂಚನಕಾರಿಯಾಗಿತ್ತಲ್ಲದೆ. ಅನೇಕರನ್ನು ಚಳವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿತು. ನಿಜಾಮನ ಹಂಗು ಮತ್ತು ದಬ್ಬಾಳಿಕೆಯನ್ನು ಕಿತ್ತೊಗೆಯುವುದು ಇವರ ಮೊದಲ ಆದ್ಯತೆಯಾಗಿತ್ತು. ಇವರ ಹೋರಾಟ ತೀವ್ರವಾದ ಸಂದರ್ಭದಲ್ಲಿ ರಜಾಕಾರರು ಜಾತ್ರೆ, ಉತ್ಸವಗಳಲ್ಲಿ ಪಾಲ್ಗೊಂಡು ಮಹಿಳೆಯರ ಮೇಲೆ ಅತ್ಯಾಚಾರ, ಅವರೆಲ್ಲರ ಒಡವೆ, ವಸ್ತ್ರ ದೋಚಿಕೊಂಡು ಹೋಗುತ್ತಿದ್ದರು. ಇದನ್ನು ನೋಡಿದ ಅಣ್ಣಾರಾವ್ ಪಾಟೀಲರು ಆ ರಜಾಕಾರರ ಮೇಲೆ ಹೋರಾಟ ಮಾಡಿದರು.

ಅನೇಕ ಕಛೇರಿಗಳ ಮೇಲೆ ದಾಳಿ ನಡೆಸಿದರು. ಈ ದಾಳಿಯಿಂದ ತತ್ತರಿಸಿ ಹೋದ ರಜಾಕಾರರು ಓಡಿ ಹೋದರು. ಹೈದರಾಬಾದ್ ಕರ್ನಾಟಕದ ಜನರು ನಿಜಾಮನ ವಿರುದ್ಧ ಅಸಹಕಾರ ಚಳವಳಿಯನ್ನು ಮಾಡಲು ನಿರ್ಧರಿಸಿದ್ದರು. ಅಣ್ಣಾರಾವ್‌ಪಾಟೀಲರ ಜಾಣ್ಮೆ ಅವರ ದೂರಾಲೋಚನೆಗಳಿಂದ ಮುಕ್ತವಾದ ಹೋರಾಟಕ್ಕೆ ರಂಗ ತಯಾರಿಕೆಯಾಯಿತು. ಗಂಡೆದೆಯ ವೀರರಾಗಿದ್ದ ಅಣ್ಣಾರಾವ ವೀರಭದ್ರಪ್ಪ ಪಾಟೀಲರವರು ಗಂಭೀರ ವ್ಯಕ್ತಿತ್ವದಿಂದ ಎಲ್ಲರ ಪ್ರೀತಿಗೆ ಪಾತ್ರರಾದರು. ವಿಮೋಚನೆಗೊಂಡ ಮೇಲೆ ಸಾರ್ವಜನಿಕ ಸೇವೆಗಾಗಿ ತಮ್ಮ ಜೀವನವನ್ನು ಮುಡುಪಾಗಿ ಇಟ್ಟರು. ಅನೇಕ ಆಧ್ಯಾತ್ಮಿಕ ವಿಚಾರದಲ್ಲಿ ಸೇವೆ ಸಲ್ಲಿಸಿದರು. ವಿಮೋಚನ ಹೋರಾಟದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಅಣ್ಣಾರಾವ್ ಪಾಟೀಲರು ಶುದ್ಧ ಚಾರಿತ್ರ್ಯಶೀಲ ವ್ಯಕ್ತಿಯಾಗಿದ್ದರು. ವಿಮೋಚನಾ ಹೋರಾಟದ ಮುಂಚೂಣಿಯಲ್ಲಿ ಇವರ ಹೆಸರು ಕೇಳಿ ಬರುತ್ತದೆ. ಇಂಥ ಒಬ್ಬ ಅಪರೂಪದ ವ್ಯಕ್ತಿ. ೧೭-೧೨-೧೯೯೮ರಂದು ನಮ್ಮನ್ನು ಅಗಲಿದರು.

### ೫.೩. ಡಿ.ಬಿ.ಕಲ್ಮಣಕರ್

"ಸ್ವಾತಂತ್ರ್ಯ ನಂತರವೂ ನಿಜಾಮರ ಆಳ್ವಿಕೆಯಲ್ಲಿಯೇ ಇದ್ದ ಹೈದರಾಬಾದ್ ಸಂಸ್ಥಾನವನ್ನು, ನಿಜಾಮರ ಆಳ್ವಿಕೆಯಿಂದ ಮುಕ್ತಿಗೊಳಿಸಲು ನಡೆದ ಹೋರಾಟ ಹೈದರಾಬಾದ್ ಕರ್ನಾಟಕ ಕಂಡ ಒಂದು ಅಪೂರ್ವ ಆಂದೋಲನ ಈ ಹೋರಾಟದಲ್ಲಿ ನಾನು ಸಕ್ರಿಯವಾಗಿ ಪಾಲ್ಗೊಂಡು ಬಂದೂಕು ಹಿಡಿದು ರಜಾಕಾರರನ್ನು ಎದುರಿಸಿದ್ದೆ. ಇದರಿಂದ ನನ್ನ ಬದುಕಿನ ದಿಕ್ಕೆ ಬದಲಾಯಿತು" ಎಂದು ಡಿ.ಬಿ.ಕಲ್ಮಣಕರ್ ಅವರು ಅಂದು ತಾವು ರಜಾಕಾರರ ಕುರಿತು ಹೋರಾಡಿದ ಕೆಚ್ಚೆದೆಯ ಧೀರ ಅನುಭವಗಳನ್ನು ಹಂಚಿಕೊಂಡರು. ಅವರು ಮಾತಾನಾಡುವಾಗ ದೇಶಭಕ್ತಿ, ಹಾಗೂ ನೊಂದ ಜನರ ವೇದನೆ ಇವರಲ್ಲಿ ಉಕ್ಕಿ ಬರುತ್ತಿತ್ತು. ಇಂತಹ ಹೋರಾಟಗಾರ ಇಂದಿಗೂ ನಮ್ಮರಾಜ್ಯದ ಹಿರಿಯ ರಾಜಕೀಯ ಮುತ್ಸದ್ದಿಯಾಗಿರುವಂತಹವರು ದಿಗಂಬರರಾವ್ ಬಲವಂತರಾವ್ ಕಲ್ಮಣಕರ್.

ಈ ವೀರ ಹೋರಾಟಗಾರ ಡಿ.ಬಿ.ಕಲ್ಮಣಕರ್ ಎಂದೇ ಪ್ರಸಿದ್ಧಿ ಹೊಂದಿದ್ದಾರೆ. ಇವರು ಮೂಲತಃ ಕಲಬುರ್ಗಿ ಜಿಲ್ಲೆಯ ಗಾಣಗಾಪೂರದವರು. ಅಲ್ಲಿನ ಕುಲೀನ ಮನೆತನದಲ್ಲಿ ಬಲವಂತರಾವ್ ರವರ

ಮಗನಾಗಿ ಹುಟ್ಟಿದವರು. ಇವರು ಪಿ.ಯು.ಸಿ ವಿದ್ಯಾರ್ಥಿಯಾಗಿದ್ದಾಗ, ಹೈದರಾಬಾದ್‌ನ ಗೌಲಿಗೂಡ ಎಂಬಲ್ಲಿ ರಜಾಕಾರರ ವಿರುದ್ಧ ಹೋರಾಟ ಮಾಡಿದವರನ್ನು ಹಿಡಿದುಕೊಂಡು ನಿಜಾಂ ಪೋಲಿಸರು ಹೋಗುತ್ತಿದ್ದರು. ಇದನ್ನು ಕಂಡು ಆ ಹೋರಾಟಗಾರರನ್ನು ನೋಡಲು ಹೋದುದೇ ಅಪರಾಧವೆಂದು ನಿಜಾಂ ಸರಕಾರ ಇವರನ್ನು ಬಂಧಿಸಿ ಜೈಲಿಗೆ ಕರೆತರಲಾಯಿತು. ನಿಜಾಮನ ಕ್ಷಮೆ ಕೇಳುವಂತೆ ಒತ್ತಾಯಿಸಿದರು, ಆದರೆ ಕಲ್ಮಣಕರ್ ಅವರು ಒಪ್ಪಲಿಲ್ಲ. ಆದಕಾರಣ ಇವರಿಗೆ ನಿಜಾಂನ ಆಜ್ಞೆಯಂತೆ ಮತ್ತೆ ಜೈಲಿನ ಶಿಕ್ಷೆ ಮುಂದುವರಿಯಿತು. ಜೈಲಿನಲ್ಲಿ ಇವರಿಗೆ ಊಟದಲ್ಲಿ ತಾರತಮ್ಯ ಮಾಡಿದರು. ಇದನ್ನು ಕಂಡು ಕಲ್ಮಣಕರ್ ನಿಜಾಂ ಸರ್ಕಾರದ ವಿರುದ್ಧ ಸತ್ಯಾಗ್ರಹ ಆರಂಭಿಸಿದರು. ಮೂರು ದಿವಸಗಳ ಕಾಲ ಉಪವಾಸ ಕೈಗೊಂಡ ನಂತರ ಇವರನ್ನು ಎಲ್ಲಾ ವ್ಯವಸ್ಥೆಯಿರುವ ಬಂಧೀಖಾನೆಗೆ ಹಾಕಲಾಯಿತು.

ದಿಗಂಬರ್‌ರಾವ್ ಅವರು ಮನಸ್ಸು ಮಾಡಿದರೆ ನಿಜಾಂನ ಆಡಳಿತದಲ್ಲಿ ಬೇಕಾದ ಹುದ್ದೆ ಪಡೆಯಬಹುದಿತ್ತು. ತಮ್ಮ ಓದು ಬರಹ ನಿಲ್ಲಿಸಿ, ಸ್ವಾಮಿ ರಮಾನಂದ ತೀರ್ಥರ ಪ್ರೇರಣೆಯಿಂದ ವಿಮೋಚನ ಹೋರಾಟಕ್ಕೆ ಧುಮುಕಿದರು. ತಮ್ಮ ಇಳಿ ವಯಸ್ಸಿನಲ್ಲಿಯೇ ಅನೇಕ ಸಲ ಜೇಲುವಾಸ ಅನುಭವಿಸಿದರು. ಜೈಲಿನಿಂದ ಬಿಡುಗಡೆ ಹೊಂದಿದ ಮೇಲೆ ಕಲಬುರ್ಗಿಗೆ ಮರಳಿ ಬಂದರು. ಕಲಬುರ್ಗಿಯಲ್ಲಿ ಮತ್ತೆ ನಿಜಾಂ ಸರಕಾರ ಪೋಲಿಸರ ಮೂಲಕ ವಾರೆಂಟ್ ಜಾರಿಗೆ ಮಾಡಿದರು. ಇದರಿಂದ ಡಾ.ದೇವುಲಗಾಂವಕರ್ ಅವರು ಕಲ್ಮಣಕರ್‌ರಿಗೆ ನಿನಗೆ ಅರೆಸ್ಟ್ ವಾರೆಂಟ್ ಇದೆ, ನೀನು ಇಲ್ಲಿರುವುದು ಬೇಡ, ಆಳಂದಗೆ ಹೋಗು ಎಂದು ತಿಳಿಸಿದರು. ಆಗ ಆಳಂದ ಇವರ ಕಾರ್ಯಕ್ಷೇತ್ರವಾಯಿತು. ಅನೇಕ ರೀತಿಯಿಂದ ಹೋರಾಟದಲ್ಲಿ ಪಾಲ್ಗೊಂಡರು. ಪ್ರತಿದಿನ ಹೋರಾಟದಲ್ಲಿ ಮಗ್ನರಾಗಿ, ಆಳಂದ ತಾಲ್ಲೂಕಿನ ಭಾಗಗಳಲ್ಲಿ ಸಂಪೂರ್ಣ ಸಂಚರಿಸಿ ಅನೇಕ ಹೋರಾಟಗಾರರನ್ನು ರೂಪಿಸಿದರು. ಕಲ್ಮಣಕರ್ ರವರ ಅಧ್ಯಕ್ಷತೆಯಲ್ಲಿ ನಿಜಾಂನ ವಿರುದ್ಧ ಹೋರಾಟ ಮಾಡುವ ಯುವಕರೆಲ್ಲರು ಸೇರಿ ಸೇಂದಿಗಿಡ ಕಡಿಯುವ ಚಳುವಳಿಯನ್ನು ಪ್ರಾರಂಭಿಸಿದರು.

ವಿಮೋಚನಾ ಹೋರಾಟದಲ್ಲಿ ಅನೇಕರು ತೀವ್ರವಾಗಿ ಪಾಲ್ಗೊಂಡರು. ಆದರೆ ಆಗ ರಜಾಕಾರರು ಅಲ್ಲಿನ ಮಹಿಳೆಯರ ಮೇಲೆ ಅತ್ಯಾಚಾರ ಕೈಗೊಂಡರು ಅನೇಕ ಜನ ಸಾವೀಗೀಡಾದರು. ಹಲವಾರು ಮಹಿಳೆಯರು ವಿಧವೆಯರಾಗಿ, ಮನೆ, ಆಸ್ತಿಗಳನ್ನು ಕಳೆದುಕೊಂಡರು. ಇಂತಹ ಬರ್ಬರ ಕೃತ್ಯಗಳು ಆರಂಭವಾದವು. ಈ ಕೃತ್ಯಗಳನ್ನು ತಡೆಗಟ್ಟಲು ವಿಮೋಚನಾ ಹೋರಾಟಗಾರರು ಸೇರಿ ರಜಾಕಾರರ ಕಚೇರಿಗಳ ಮೇಲೆ ದಾಳಿನಡೆಸಿದರು. ಮುಂದೆ ಕಲ್ಮಣಕರ್‌ರವರು ಕೇಸರ ಜಾವಳಗಾ ಶಿಬಿರದ ಇನ್ ಜಾರ್ಜ್ ಶಿಬಿರಾಧಿಪತಿಯಾದರು. ಕಾಂಗ್ರೆಸ್ ಪಕ್ಷದ ಕರೆ ಹಾಗೂ ರಜಾಕಾರರ ದೌರ್ಜನ್ಯ ತುಂಬ

ಗಂಭೀರವಾಗಿ ಮುಂದುವರೆಯಿತು. ಇದನ್ನು ಅರಿತ ಕಾಂಗ್ರೆಸ್ ಪಕ್ಷದವರೆಲ್ಲ ಸೇರಿ ಶಸ್ತ್ರಾಸ್ತ್ರ ತರಬೇತಿ ಹೊಂದುವುದು ಅನಿವಾರ್ಯ ಎಂಬ ಸ್ಥಿತಿ ಅರಿತು ಕೊಂಡರು. ಹೈದರಾಬಾದ್ ಕರ್ನಾಟಕದ ವಿಮೋಚನಾ ಹೋರಾಟಗಾರರೆಲ್ಲರು ಮುಂದಾಗಿ ಹೋರಾಟದ ಮೂಲಕ ಶಸ್ತ್ರಾಸ್ತ್ರಗಳು ನಮಗೆ ಬೇಕು ಎಂಬ ಅಂಶವನ್ನು ಎತ್ತಿ ಹೇಳಿದರು. ಆಗ ಹೈದರಾಬಾದ್‌ಗೆ ಕಲ್ಮ್ಣಕರ್ ಅವರನ್ನು ಕಳಿಸಿಕೊಡಲಾಯಿತು. ಶಸ್ತ್ರಾಸ್ತ್ರ ತರಬೇತಿ ಪಡೆದುಕೊಂಡು ವಿಮೋಚನೆ ಹೋರಾಟಗಾರರಿಗೆ ತರಬೇತಿಯನ್ನು ನೀಡುವ ವ್ಯವಸ್ಥೆ ಮಾಡಿದರು. ಬಾಂಬು ತಯಾರಿಕೆ, ರೈಫಲುಗಳ ಬಳಕೆ ಕುರಿತು ಅನೇಕ ಆಯುಧಗಳ ಪರಿಚಯ ಮಾಡಿಕೊಟ್ಟರು.

ಕೇಸರ ಜವಳಗಾ ಶಿಬಿರದ ಶಿಬರಾಧಿಪತಿ ಆಗಿದ್ದ ಕಲ್ಮ್ಣಕರ್ ಅವರು ಆ ಭಾಗಗಳಲ್ಲಿ ರಜಾಕಾರರರೊಂದಿಗೆ ಹೋರಾಟ ನಡೆಸಿದರು. ರಜಾಕಾರರ ವಿರುದ್ಧ ಗುಂಡುಹಾರಿಸಿದರು. ಪಠಾಣರ ಅಪಾರ ಸೈನ್ಯವಿದ್ದರೂ ಸಹ ಹೆದರದೆ ಈ ಹೋರಾಟಗಾರರು ಮುನ್ನುಗ್ಗಿದ್ದರು. ಈ ಹೋರಾಟದಲ್ಲಿ ಮೂರು ಜನ ರಜಾಕಾರರು ನಿಧನ ಹೊಂದಿದರು. ಆದರೆ ಈ ವಿಮೋಚನಗಾರರಿಗೆ ಯಾವ ಹಾನಿ ಆಗದಂತೆ ನೋಡಿಕೊಂಡ ಕೀರ್ತಿ ಕಲ್ಮ್ಣಕರ್ ಅವರಿಗೆ ಸಲ್ಲುತ್ತದೆ. ಧುದನಿ, ಗೌಡಗಾಂವ ಮುಂತಾದ ಶಿಬಿರಗಳ ಕಾರ್ಯಕರ್ತರಿಗೆ ಕಲ್ಮ್ಣಕರ್ ಅವರು ಶಸ್ತ್ರಾಸ್ತ್ರ ತರಬೇತಿ ನೀಡಿದರು. ಹೀಗೆ ಡಿ.ಬಿ. ಕಲ್ಮ್ಣಕರ್ ಅವರು ಹೋರಾಟದ ಮುಂಚೂಣಿಯಲ್ಲಿ ನಿಂತರು. ನಿಜಾಂ ಹಾಗೂ ರಜಾಕಾರರಿಗೆ ಸಿಂಹಸ್ವಪ್ನವಾದರು. ಇದರಿಂದ ಕೋಪೋದ್ರಿಕ್ತರಾದ ರಜಾಕಾರರು ಇವರನ್ನು ಕೊಲ್ಲಲು ಆದೇಶಿಸಿದರು. ಅದನ್ನು ತಿಳಿದ ಕಲ್ಮ್ಣಕರ್ ಅವರ ಪ್ರಯತ್ನ ವಿಫಲಗೊಳಿಸಿದರು. ಇದಾದ ಸ್ವಲ್ಪದಿನಗಳಲ್ಲಿಯೇ ಹೈದರಾಬಾದ್ ಪ್ರಾಂತ್ಯ ಭಾರತಕ್ಕೆ ವಿಲೀನಗೊಂಡಿತು. ಆಗ ಆಳಂದ ತಾಲೂಕಿನ ಸಾರ್ವಜನಿಕ ಸೇವೆಗಾಗಿ ಕಾರ್ಯ ಪ್ರಾರಂಭಿಸಿದರು.

ಕಲ್ಮ್ಣಕರ್‌ರವರು ರಾಜಕಾರಣಕ್ಕೆ ಸೇರಿ ವಿಧಾನ ಸಭೆ ಸದಸ್ಯರಾಗಿ, ಸಚಿವರಾಗಿ, ಎಚ್.ಕೆ.ಡಿ.ಪಿ ಅಧ್ಯಕ್ಷರಾಗಿ ಮತ್ತು ರಾಜ್ಯ ಸಭಾಪತಿಯಾಗಿ ಸೇವೆ ಸಲ್ಲಿಸಿದರು. ಇಂತಹ ಹಿರಿಯ ಹೋರಾಟಗಾರ ವಿಮೋಚನಾ ನಾಂದಿ ಹಾಡಿದ ಚೇತನ ಡಿ.ಬಿ.ಕಲ್ಮ್ಣಕರ್‌ರನ್ನು ನಾವು ಇಂದಿಗೂ ಕಾಣಬಹುದು.[೪]

## ೫.೪. ಚಂದ್ರಶೇಖರ ಪಾಟೀಲ ಮಹಾಗಾಂವ

ಒಬ್ಬ ವ್ಯಕ್ತಿ ಉನ್ನತ ಮಟ್ಟಕ್ಕೆ ಬೆಳೆಯಬೇಕಾದರೆ ಮುಖ್ಯವಾಗಿ ಅವನಲ್ಲಿ ಧೈರ್ಯ ಬೇಕು, ಹಾಗೂ ಅವನ ಸುತ್ತಲಿನ ಪರಿಸರದ ಪ್ರಭಾವ ಕೂಡ ಕಾರಣವಾಗುತ್ತದೆ, ಎಂಬುದಕ್ಕೆ ಚಂದ್ರಶೇಖರ ಪಾಟೀಲರು ಮಾದರಿ ಉದಾಹರಣೆ. ಕಲಬುರ್ಗಿಯಿಂದ ಬೀದರಗೆ ಹೋಗುವ ಹೆದ್ದಾರಿಯಲ್ಲಿ ಬರುವ

ಮಹಾಗಾಂವ ಪ್ರಸಿದ್ಧ ಊರು. ಈ ಊರಿನಲ್ಲಿ ವಾಸವಾಗಿರುವ ದೊಡ್ಡ ಕುಟುಂಬದ ಸಂಗಶೆಟ್ಟಿ ಹಾಗೂ ವೀರಮ್ಮನವರ ಎರಡನೆಯ ಮಗನಾಗಿ ಚಂದ್ರಶೇಖರ ಪಾಟೀಲರು ಜನಿಸಿದರು. ಪಾಟೀಲರ ಮನೆತನ ಶ್ರೀಮಂತಿಕೆಯಿಂದ ಕೂಡಿದ ಹಾಗೂ ಅಷ್ಟೇ ಸೌಜನ್ಯ ಸಂಸ್ಕೃತಿಯ ಗೂಡಾಗಿತ್ತು. ಅವರ ಪ್ರಾರಂಭಿಕ ಶಿಕ್ಷಣ ಮಹಾಗಾಂವದಲ್ಲಿ ಆರಂಭವಾಯಿತು. ತಂದೆಯ ಒತ್ತಾಯದ ಮೇರೆಗೆ ಶಾಲೆಗೆ ಹೋಗುತ್ತಿದ್ದರೇ ಹೊರತು ಸ್ವ ಆಸಕ್ತಿಯಿಂದಲ್ಲ. ಆದರೂ ಪಾಟೀಲರಿಗೆ ವಿದ್ಯೆ ಒಗ್ಗಲಿಲ್ಲ. ಕೊನೆಗೆ ಪಾಟೀಲರ ತಂದೆ ಕಲಬುರ್ಗಿಗೆ ತಂದು ಶಾಲೆಗೆ ಸೇರಿಸಿದರು. ಅಲ್ಲಿಯೂ ಪಠ್ಯಕ್ಕಿಂತ ಪಠ್ಯೇತರ ಚಟುವಟಿಕೆಗಳ ಕಡೆಗೆ ಹೆಚ್ಚಿನ ಗಮನ ನೀಡಿದರು. ಹೀಗೆ ಇರುವಾಗಲೇ ೧೯೪೭-೪೮ರಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟನಡೆಯುತ್ತಿತ್ತು. ಗಾಂಧೀಜಿಯವರ ಪ್ರಭಾವದಿಂದ ಪಾಟೀಲರು ಹೋರಾಟದಲ್ಲಿ ಪಾಲ್ಗೊಂಡರು. ಬ್ರಿಟಿಷರ ಹಾಗೂ ನಿಜಾಂನ ಆಡಳಿತದ ವಿರುದ್ಧ ಧ್ವನಿ ಎತ್ತಿದರು. ಅನೇಕ ಸಾವು ನೋವು, ಅತ್ಯಾಚಾರ, ಶೀಲಹರಣ ಕಣ್ಣಾರೆ ಕಂಡ ಚಂದ್ರಶೇಖರ ಪಾಟೀಲರು, ಯುವಕರನ್ನು ಸಂಘಟಿಸಿದರು. ನಿಜಾಂನು ಬಿತ್ತಿದ ಮತಾಂಧತೆ ಬೀಜವನ್ನು ಕಿತ್ತು ಹಾಕಿ, ಜನರಲ್ಲಿ ಬೇರೂರಿದ್ದ ಜಡತ್ವದ ಸಂಕೋಲೆ ಬಿಡಿಸಿ ಎಲ್ಲರಲ್ಲೂ ಸ್ವಾಭಿಮಾನ ತುಂಬಿದರು.

ಚಂದ್ರಶೇಖರರು ಅನೇಕ ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ನೇರ ಸಂಪರ್ಕ ಹೊಂದಿದ್ದರು. ಹಿರಿಯರ ಆದರ್ಶ ಪಾಲಿಸಿ ಅನೇಕ ಯುವಕರನ್ನು ಸಂಘಟಿಸಿದರು. ಯುವಕರ ಮನಸ್ಸಿನ ಮೇಲೆ ದೇಶಭಕ್ತಿಯ ಪ್ರಭಾವ ಬೀರಿದರು. ಊರಿಂದೂರಿಗೆ ತಿರುಗಿ ಯುವಕರನ್ನು ಸೇರಿಸಿ, ನಿಜಾಂನ ವಿರುದ್ಧ ಹೋರಾಡಲು ಪ್ರಾರಂಭಿಸಿದರು. "ತರುಣ ಸಂಘ" ಸ್ಥಾಪಿಸಿ ಅದರ ಸಂಸ್ಥಾಪಕ ಅಧ್ಯಕ್ಷರಾದರು. 'ಈ ದೇಶಕ್ಕಾಗಿ ಪ್ರಾಣವನ್ನು ತ್ಯಾಗಮಾಡಿ ಹೋರಾಡಲು ಸಿದ್ಧರಿರುವವರೆಲ್ಲರೂ ಬನ್ನಿ, ಉಕ್ಕಿನ ಗುಂಡುಗಳು ಮೈಯೊಳಗೊಕ್ಕರೂ ಹೋರಾಟಕ್ಕೆ ಬನ್ನಿರೆಂದು' ಆಹ್ವಾನವಿತ್ತರು.

ಅವರ ಕಂಚಿನ ಕಂಠದ ಮಾತುಗಳಿಂದ ಜನರಲ್ಲಿ ರೋಷ ಉಕ್ಕಿತು. ಚಾಕುವಿನಿಂದ ತನ್ನ ತೊಡೆಯನ್ನು ಇರಿದುಕೊಂಡು, ತಮ್ಮ ರಕ್ತದ ಮೂಲಕ ಹೆಸರು ಬರಿಸಿ, ಕ್ರಾಂತಿ ಮಾಡಿದ ಧೀರಯೋಧರು ಚಂದ್ರಶೇಖರ ಪಾಟೀಲರು ಆಗಿದ್ದರು. ಇಂತಹ ಸಾಹಸ ಕೆಲಸಕ್ಕೆ ಬಹಳ ಧೈರ್ಯದಿಂದ ಎಲ್ಲರಿಗಿಂತ ಮುಂಚೂಣಿಯಲ್ಲಿರುತ್ತಿದ್ದರು.

ಶಿರಗಾಪುರ, ಬಬಲಾದ, ನಾಗೂರುಗಳಲ್ಲದೆ ಇನ್ನೂ ಅನೇಕ ಕಡೆ ರಜಾಕಾರರ ಕಛೇರಿಗಳನ್ನು ಧ್ವಂಸ ಮಾಡಿ ರಜಾಕಾರರನ್ನು ಹೊಡೆದೋಡಿಸಿದ್ದರು. 'ವಂದೇ ಮಾತರಂ' ಘೋಷಣೆ ಕೂಗಿದ್ದಕ್ಕೆ ನಿಜಾಂ ಸರಕಾರ ಇವರಿಗೆ ಜೈಲು ಶಿಕ್ಷೆ ನೀಡಿತು. ವೈಜಾಪೂರ ಜೈಲಿನಿಂದ ಕಲುಬುರ್ಗಿ ಜೈಲಿಗೆ ಸ್ಥಳಾಂತರಿಸುವ ಸಂದರ್ಭದಲ್ಲಿ ಕಾಸಿಂ ರಜ್ವಿಯೊಂದಿಗೆ ಮುಖಾಮುಖಿಯಾಗಿ ಹೋರಾಡಿದರು.

ಜೈಲಿನಲ್ಲಿ ಸುಮ್ಮನಿರದೇ, ಶರಣರ ವಚನ ಹಾಡಿ, ತಮ್ಮ ದೇಶ ಪ್ರೇಮ ಮತ್ತು ಕನ್ನಡ ನಾಡಿನ ಕೀರ್ತಿ ಹೆಚ್ಚಿಸಿಕೊಳ್ಳುತ್ತಿದ್ದರು. ನಿಜಾಂನ ಶರಣಾಗತಿ ನಂತರ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟರು. ಹೈದರಾಬಾದ್ ವಿಧಾನ ಸಭೆ ಶಾಸಕರಾಗಿ, ಮೈಸೂರು ವಿಧಾನ ಸಭೆಗೆ ಕಮಲಾಪುರ ಕ್ಷೇತ್ರದಿಂದ ಆಯ್ಕೆಯಾದರು. ರಾಜಕೀಯ ರಂಗದಲ್ಲಿ ಸಮಾಜ ಸೇವೆ ಮಾಡಿದರು. ದುರ್ದೈವದಿಂದ ೧೯೬೦ರಲ್ಲಿ ಬಸ್ ಅಪಘಾತದಲ್ಲಿ ಶ್ರೀ ಚಂದ್ರಶೇಖರ ಪಾಟೀಲರು ಮರಣಹೊಂದಿದರು. ವೀರ ಹೋರಾಟಗಾರ, ಸಮಾಜಸೇವಕ, 'ಸೇವಾದುರಂಧರ' ಎಂದು ಕರೆಸಿಕೊಂಡು ಇಂದಿಗೂ ಅಮರವಾಗಿದ್ದಾರೆ.[೫]

### ೫.೫ ಮಹಾದೇವಪ್ಪ ರಾಂಪುರೆ

ಭಾರತದ ಸ್ವಾತಂತ್ರ್ಯ ಹೋರಾಟ ಚಳುವಳಿಯಲ್ಲಿ ಭಾಗವಹಿಸಿದವರು, ವಕೀಲರು, ಅಧ್ಯಾಪಕರು, ವ್ಯಾಪಾರಿಗಳು, ಪತ್ರಿಕೋದ್ಯಮದವರು ರೈತರು ಮತ್ತು ಜನಪದ ಹಾಡುಗಾರ್ತಿಯರು ಸಹ ಭಾಗವಹಿಸಿದ ಹಲವಾರು ದೃಷ್ಟಾಂತಗಳು ದೊರೆಯುತ್ತವೆ. ಅದರಲ್ಲಿ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ 'ಕುಂಬಾರಿ' ಎಂಬ ಚಿಕ್ಕಹಳ್ಳಿಯಲ್ಲಿ ಯಶವಂತಪ್ಪ ಹಾಗೂ ಗುರುದೇವಿಯರ ಉದರದಲ್ಲಿ ಜನಿಸಿದ 'ಮಹಾದೇವಪ್ಪ ರಾಂಪುರೆ' ಎಂಬುವವರೂ ಒಬ್ಬರು. ಇವರು ಬಾಲ್ಯದಲ್ಲಿ ಶಿಕ್ಷಣದ ಕಡೆಗೆ ಹೆಚ್ಚಿನ ಒಲವನ್ನು ತೋರಿಸಲಿಲ್ಲ. ಕಾರಣ ಮಗ ಕಾನೂನು ಪದವೀಧರನಾಗಬೇಕೆಂಬ ತಂದೆಯ ಆಸೆಯು ಈಡೇರಲಿಲ್ಲ. ದೇಶಭಕ್ತಿ, ಅಭಿಮಾನಗಳಿಂದ, ಅಂದು ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ಘಟನೆಗಳಿಂದ ಪ್ರೇರಿತರಾಗಿ ಇವರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು.

ಓದಿಗೆ ಕೈಕೊಟ್ಟು, ಸ್ವಾತಂತ್ರ್ಯಹೋರಾಟಕ್ಕೆ ಪಾದರ್ಪಣೆ ಮಾಡಿದರು. ಶ್ರೇಷ್ಠ ಹೋರಾಟಗಾರರ ಹಾಗೂ ಕ್ರಾಂತಿಕಾರಿಗಳಲ್ಲದೇ, "ರ್‍ಯಾಡಿಕಲ್ ಡೆಮಾಕ್ರೆಟಿಕ್" ಪಕ್ಷದ ಎಂ.ಎನ್.ರಾಯ್‌ರ ವಿಚಾರಗಳಿಂದ ಪ್ರೇರಿತರಾದರು. ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದ ಪಾಟೀಲರಿಗೆ ಬ್ರಿಟಿಷ್ ಸರಕಾರ ವಾರೆಂಟ್ ಹೊರಡಿಸಿತು. ಕೊನೆಗೆ ಪಾಟೀಲರು ಕಲಬುರ್ಗಿಗೆ ಪ್ರಯಾಣಬೆಳೆಸಿದರು.

ಕಲಬುರ್ಗಿಯಲ್ಲಿ ಅವರಿಗೆ ವಿಚಿತ್ರ ರಾಜಕೀಯ ಸ್ಥಿತಿ ಕಂಡಿತು. ಇಲ್ಲಿನ ನಿಜಾಂನ ಆಳ್ವಿಕೆಯಿಂದ ಬೇಸತ್ತ ಜನರ ಸಂಕಟ ಕಣ್ಣಾರೆಕಂಡರು. ಭಾರತದಲ್ಲೆಲ್ಲಾ ಸ್ವಾತಂತ್ರ್ಯ ಬೆಳಕು ಬೆಳಗಿತ್ತು. ಆದರೆ ಹೈದರಾಬಾದ್ ಕರ್ನಾಟಕ ಭಾಗದವರಿಗೆ ನಿಜಾಂ ತಡೆ ಆಜ್ಞೆ ಹೊರಡಿಸಿದ. ಹೈದರಾಬಾದ್ ಕರ್ನಾಟಕ ಭಾಗಕ್ಕೆ ಕಲಬುರ್ಗಿ ಕೇಂದ್ರ ಸ್ಥಳವಾದ್ದರಿಂದ ಸತ್ಯಾಗ್ರಹ, ರಾಷ್ಟ್ರಧ್ವಜ ಹಾರಿಸುವುದು ಮುಂತಾದ ಚಳವಳಿಗಳು ನಡೆದವು. ಅದರಲ್ಲಿ ನೇರವಾಗಿ ಮಹಾದೇವಪ್ಪನವರ ಪಾತ್ರ ಬಹುದೊಡ್ಡದಾಗಿತ್ತೆನ್ನ ಬಹುದು. ನಿಜಾಂರ ವಿರುದ್ಧ ಹೋರಾಡಿ ಅನೇಕ ರಜಾಕಾರರನ್ನು ಕೊಂದರು. ನಿಜಾಂ ಪೋಲಿಸರನ್ನು

ಹತ್ಯೆಗೈದರು. ಪಾಟೀಲರನ್ನು ಕಂಡು ಅನೇಕ ರಜಾಕಾರರು ಓಡಿಹೋದರು. ನಿಜಾಮನಿಗೆ ಇವರು ಸಿಂಹಸ್ವಪ್ನವಾಗಿದ್ದರು. ೧೯೪೮ರವರೆಗೆ ನಡೆದ ವಿಮೋಚನಾ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಅನೇಕರಿಗೆ ಪ್ರೇರಕರಾದರು. ಸ್ವಾತಂತ್ರ್ಯ ಬಂದ ನಂತರ ಸಾರ್ವಜನಿಕ ಹಾಗೂ ರಾಜಕೀಯ ರಂಗ ಪ್ರವೇಶಿದರು. ಅನೇಕ ಹುದ್ದೆ ಅಲಂಕರಿಸಿದರು. ಮೂರು ಸಲ ಲೋಕಸಭೆಗೆ ಪ್ರವೇಶಿಸಿ ಸೋಲಿಲ್ಲದ ಸರದಾರರಾದರು. ಹೈದರಾಬಾದ್ ಕರ್ನಾಟಕದಲ್ಲಿ ಶಿಕ್ಷಣ ಕ್ರಾಂತಿ ಮಾಡಿ, ಶಿಕ್ಷಣದ ಹಂತ ಹಂತ ಬೆಳವಣಿಗೆಗೆ ಕಾರಣಕರ್ತರಾಗಿ ಶಿಕ್ಷಣ ಶಿಲ್ಪಿಯಾದರು. ಸಮಾಜ ಸೇವೆ, ಸ್ವಾತಂತ್ರ್ಯ, ಅಜ್ಞಾನದ ವಿರುದ್ಧ ಹೋರಾಟ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದರು.

ಯಾವಾಗಲೂ ಹಸನ್ಮುಖ ವ್ಯಕ್ತಿತ್ವ ಹೊಂದಿದ ಪಾಟೀಲರು, ಶುದ್ಧ-ಸರಳ ನಡೆ-ನುಡಿ ಹಾಗೂ ಶಾಂತ ಸ್ವಭಾವದವರಾಗಿದ್ದರು. ಸ್ವಾತಂತ್ರ್ಯ ಹೋರಾಟ ಹಾಗೂ ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ವೀರನಾಯಕರಾಗಿ ತಮ್ಮ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸಿಕೊಂಡರು. ೬-೨-೧೯೭೩ರಲ್ಲಿ ತಮ್ಮ 'ಜಯದೀಪ' ಮನೆಯಲ್ಲಿ ನಿಧನ ಹೊಂದಿದರು. ಒಬ್ಬ ವಿಮೋಚನಾ ಹೋರಾಟಗಾರರನ್ನು, ಶಿಕ್ಷಣ ಶಿಲ್ಪಿಯನ್ನು ಕಳೆದುಕೊಂಡ ನಾಡು ಅನಾಥವಾಯಿತೆನ್ನಬಹುದು.[೬]

## ೫.೬ ವಿದ್ಯಾಧರ ಗುರೂಜಿ

ಆರ್ಯ ಸಮಾಜದ ಪ್ರಮುಖ ನೇತರರಾಗಿ, ಕ್ರಾಂತಿಯ ಕಿಡಿಯನ್ನೇ ತಮ್ಮ ಉಸಿರಾಗಿಸಿಕೊಂಡು, ವಿಮೋಚನಾ ಹೋರಾಟದಲ್ಲಿ ಧುಮುಕಿದ ಬಿಕ್ಕಪ್ಪ ಮುಂದೆ ದೊಡ್ಡ ಹೋರಾಟಗಾರರಾಗಿ ವಿದ್ಯಾಧರ ಗುರೂಜಿ ಆಗಿ ಗುರುತಿಸಿಕೊಂಡರು. ಇಂದಿಗೂ ತಮ್ಮ ದೃಢ ನಿಲುವಿನ ಸಾತ್ವಿಕ ಮನುಷ್ಯ ಗುರೂಜಿ ಆಗಿದ್ದಾರೆ. ಬಿಕ್ಕಪ್ಪ ಯಾದಗಿರಿ ತಾಲೂಕಿನ ಗುರುಮಿಠಕಲ್ ಗ್ರಾಮದಲ್ಲಿ ೧೯೧೪ರಲ್ಲಿ ಜನಿಸಿದರು. ಆರ್ಯ ಸಮಾಜದ ಸನ್ಯಾಸಿಗಳಿಂದ ದೀಕ್ಷೆ ಹೊಂದಿ ವಿದ್ಯಾಧರ ಆದರು.

೧೯೩೧ರಲ್ಲಿ ಭಗತ್ ಸಿಂಗರನ್ನು ಬ್ರಿಟಿಷರು ಗಲ್ಲಿಗೇರಿಸಿದ ವಿಚಾರ ತಿಳಿದು, ಅದನ್ನು ವಿರೋಧಿಸಿ ಆಂಗ್ಲರ ವಿರುದ್ಧ ವಿದ್ಯಾಧರ ಗುರೂಜಿ ಪ್ರತಿಭಟನೆ ಆರಂಭಿಸಿದ್ದರು. ಸ್ವತಂತ್ರವಾಗುವ ಹಂಬಲದಿಂದ ಅನೇಕ ಹೋರಾಟ ಚಳವಳಿಗಳನ್ನು ಮಾಡಿ ಪ್ರಮುಖ ಹೋರಾಟಗಾರರಾದರು. ಹಳ್ಳಿ ಹಳ್ಳಿಗೆ ಹೋಗಿ ಜನರಲ್ಲಿ ರಾಷ್ಟ್ರಭಕ್ತಿ, ದೇಶಪ್ರೇಮ ಹಾಗೂ ಅನೇಕ ದೇಶ ಪ್ರೇಮಿಗಳ ತ್ಯಾಗ, ಬಲಿದಾನ ಮತ್ತು ಕಾರ್ಯಗಳನ್ನು ಜನತೆಗೆ ತಿಳಿಸುತ್ತಿದ್ದರು. ಭಾರತ ಸ್ವಾತಂತ್ರ್ಯ ಆದ ನಂತರ ಮುಂದೆ ನಿಜಾಂ ಸರಕಾರದ ವಿರುದ್ಧ ಹೋರಾಡಿದರು. ಹೈದರಾಬಾದ್ ಕರ್ನಾಟಕ ಪ್ರದೇಶದ ಜನತೆ ಭಯ

ಭೀತಿಯಿಂದ ನಡುಗಿತ್ತು. ಆಗ ವಿದ್ಯಾಧರ ಗುರೂಜಿ ಅವರು ನಿಜಾಂ ಹಾಗೂ ರಜಾಕಾರರ ಮೇಲೆ ಬಂಡೆದ್ದರು. ರಜಾಕಾರರ ಪಡೆಯನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾದರು. ಹೈದರಾಬಾದ್ ನಿಜಾಂನು ಇವರನ್ನು ರಾಜದ್ರೋಹಿ ಎಂದು ಕರೆದನು. ವಿದ್ಯಾಧರ ಗುರೂಜಿಯವರನ್ನು ಹಿಡಿದು ಕೊಟ್ಟವರಿಗೆ ೧೦ ಸಾವಿರ ರೂಪಾಯಿ ಬಹುಮಾನ ಎಂದು ನಿಜಾಂನು ಘೋಷಿಸಿದನು. ಅನೇಕ ಸಲ ಪ್ರಾಣಾಪಾಯದಿಂದ ಪಾರಾದರು. ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗಿಯಾಗಿ, ಬ್ರಿಟಿಷರ ವಿರುದ್ಧ ಹೋರಾಡಿದ ಗುರೂಜಿಯವರು ನಿಜಾಂನ ವಿರುದ್ಧ ಹೋರಾಡಲು ಧೈರ್ಯ ಗುಂದಲಿಲ್ಲ. ಅನೇಕ ಸಲ ಹಿಂದಿ, ಉರ್ದು ಹಾಗೂ ಕನ್ನಡ ಭಾಷೆಯಲ್ಲಿ ಭಾಷಣ ಮಾಡಿ ಜನರನ್ನು ನಿಜಾಂನ ವಿರುದ್ಧ ಜನತೆಯನ್ನು ಹುರಿದುಂಬಿಸಿದರು. ೧೯೪೭-೪೮ರಲ್ಲಿ ಸುಭಾಸ್‌ಚಂದ್ರಬೋಸ್‌ರನ್ನು ಕಲಬುರ್ಗಿಯಲ್ಲಿ ಭೇಟಿಯಾಗಿ, ನಿಜಾಂ ಹಾಗೂ ರಜಾಕಾರರ ದಬ್ಬಾಳಿಕೆಯ ಬಗ್ಗೆ ಚರ್ಚಿಸಿದರು. ಅವರ ಮಾರ್ಗದರ್ಶನದಲ್ಲಿ ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿ ಹೋರಾಟ ಮುಂದುವರೆಸಿದರು. ಹೀಗೆ ಅವರು ಜೀವನದುದ್ದಕ್ಕೂ ಸ್ವಾತಂತ್ರ್ಯ ಪ್ರೇಮಿಯಾಗಿ, ಹೋರಾಟ ಮಾಡಿದರು. ಹೆಜ್ಜೆ ಹೆಜ್ಜೆಗೂ ನಿಜಾಂ ಪೋಲಿಸರಿಂದ ಹಾಗೂ ಗುಪ್ತಚರದಳದವರ ಹದ್ದಿನ ಕಣ್ಣುಗಳಿಂದ ತಪ್ಪಿಸಿಕೊಳ್ಳುತ್ತ, ಗುರೂಜಿ ಅಪಾಯದ ದಿನಗಳನ್ನು ನೂಕಿದ್ದಾರೆ. ನಿಜಾಂ ಪ್ರಾಂತದಿಂದ ರಜಾಕಾರರ ಅತ್ಯಾಚಾರಗಳಿಂದ ತಪ್ಪಿಸಿಕೊಳ್ಳಲು ಬಂದ ಹಿಂದೂ ನಿರಾಶ್ರಿತರಿಗೆ ವಿದ್ಯಾಧರ ಗುರೂಜಿ ಸೊಲ್ಲಾಪುರದಲ್ಲಿ ಎಲ್ಲ ಅನುಕೂಲತೆಗಳನ್ನು ಒದಗಿಸಿಕೊಟ್ಟರು.

ಅನೇಕ ಧೈರ್ಯ ಸಾಹಸಗಳೊಂದಿಗೆ ಹೋರಾಡಿದ ಧೀರರಾಗಿದ್ದರು. ಹೈದರಾಬಾದ್ ಪ್ರಾಂತ್ಯ ಭಾರತಕ್ಕೆ ಸೇರಿದ ಮೇಲೆ ೧೯೬೨ರಲ್ಲಿ ಗುರುಮಿಠಕಲ್ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಯಾದರು. ಅನೇಕ ಜನಪರಕಲ್ಯಾಣ ಕಾರ್ಯಗಳನ್ನು ಕೈಗೊಂಡರು. ಈಗ ಅವರು ರಾಜಕೀಯ ಜೀವನವನ್ನು ಬಿಟ್ಟು ಕಲಬುರ್ಗಿಯಲ್ಲಿ ಹಿಂದಿ ಪ್ರಚಾರ ಸಭಾ ಶಿಕ್ಷಣ ಸಂಸ್ಥೆಯ ಮೂಲಕ ಸಮಾಜ ಸೇವೆ ಮಾಡುತ್ತಿದ್ದಾರೆ.[೬]

## ೫.೭ ಚೆನ್ನಬಸಪ್ಪ ಕುಳಿಗೇರಿ

ಮನುಷ್ಯ ಸ್ವತಂತ್ರವಾಗಿ ಬಾಳಲು ಇಷ್ಟ ಪಡುತ್ತಾನೆ. ಅದಕ್ಕಾಗಿ ತ್ಯಾಗ, ಬಲಿದಾನ, ಹಾಗೂ ಕಷ್ಟಗಳನ್ನು ಅನುಭವಿಸಿ, ಮುಂದೆ ಸ್ವಾತಂತ್ರ್ಯ ಜೀವನ ನಡೆಸಲು ದಾರಿಯನ್ನು ನೋಡುತ್ತಾ ಬಾಳುತ್ತಾನೆ. ಆದರೆ ಸ್ವತಂತ್ರವಾಗಿ ಬಾಳಲು ಬಿಡದ ಬ್ರಿಟಿಷ್ ಹಾಗೂ ನಿಜಾಂ ಸರಕಾರ ಇವು ಎರಡರ ಮಧ್ಯ ಒದ್ದಾಡಿ ಪ್ರಾಣ ಕಳೆದುಕೊಂಡ ಸ್ವಾತಂತ್ರ್ಯ ಹೋರಾಟಗಾರರನ್ನು ನಾವು

ನೋಡುತ್ತೇವೆ. ನಿಜಾಂರ ದಬ್ಬಾಳಿಕೆಯನ್ನು ಸಹಿಸದೇ ಹೈದರಾಬಾದ್ ಕರ್ನಾಟಕ ಭಾಗಗಳ ಜನರು ಅವರ ವಿರುದ್ಧ ತಿರುಗಿ ನಿಂತರು.

ಅಂತಹ ವೀರ ನಾಯಕರಲ್ಲಿ ಚನ್ನಬಸಪ್ಪ ಕುಳಿಗೇರಿ ಒಬ್ಬರು. ಇವರು ಜೀವರ್ಗಿ ತಾಲ್ಲೂಕಿನ ಕುಳಗೇರಿ ಎಂಬ ಗ್ರಾಮದಲ್ಲಿ ಜನಿಸಿದರು. ಪ್ರಾರಂಭದ ದಿನಗಳಲ್ಲಿ ಸ್ವಗ್ರಾಮದಲ್ಲಿ ಶಾಲೆಗೆ ಸೇರಿ, ಮುಂದೆ ಹೈಸ್ಕೂಲಿಗಾಗಿ ಸುರಪುರಕ್ಕೆ ಬಂದರು. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಅವರಿಗೆ ಅನೇಕ ದೇಶ ಭಕ್ತರ ಹಾಗೂ ರಾಷ್ಟ್ರೀಯ ಭಾಷಣಕಾರರ ಪರಿಚಯವಾಯಿತು. ಅತ್ಯಾಚಾರ, ಅನ್ಯಾಯಗಳಿಗೆ ತಿರುಗಿ ನಿಲ್ಲುವ ಧೈರ್ಯ ಇವರಲ್ಲಿ ಮೂಡಿಬಂದಿತು. ೧೯೪೭ರಲ್ಲಿ ಸ್ವಾತಂತ್ರ್ಯ ಬಂದಾಗ ಅವರು ಸಂತೋಷ ಪಟ್ಟು ಆನಂದಿಸಿದರು. ಆದರೆ ಆ ಸಂತೋಷ ಹೈದರಾಬಾದ್ ಪ್ರಾಂತ್ಯದಲ್ಲಿ ಹಂಚಿಕೊಳ್ಳುವಂತಿರಲಿಲ್ಲ ಎಂಬ ಸುದ್ದಿ ಅವರಿಗೆ ಮುಟ್ಟಿತು. ಆಗ ಅವರು ನಿಜಾಂ ಸರಕಾರದ ವಿರುದ್ಧ ಹೋರಾಡಲು ನಿಂತರು. ರಜಾಕಾರರ ಕ್ರೂರ ದೃಶ್ಯಗಳನ್ನು ಇವರು ಎದುರಿಸುತ್ತಾ, ಒಬ್ಬ ಸಂಘಟಿತರಾಗಿ ಸ್ವಾಮಿರಮಾನಂದ ತೀರ್ಥ, ಜಿ.ಎಸ್.ಮೇಲ್ಕೋಟಿ, ಜಗನ್ನಾಥರಾವ್ ಚಂಡ್ರಿಕಿ, ಭೀಮರೆಡ್ಡಿ, ಇವರೊಂದಿಗೆ ಸಂಪರ್ಕ ಬೆಳೆಸಿಕೊಂಡು, ಪಠಾಣರ ವಿರುದ್ಧ ಶಸ್ತ್ರಾಸ್ತ್ರ ಬಂಡಾಯ ಪ್ರಾರಂಭಿಸಿದರು. ನಿಜಾಂ ರಾಜ್ಯದ ಗಡಿ ಪ್ರದೇಶ ಗ್ರಾಮಗಳಲ್ಲಿನ ರಜಾಕಾರರು ಅತೀ ಹೆಚ್ಚು ದುಷ್ಟಕೃತ್ಯಗಳಲ್ಲಿ ತೊಡಗಿದ್ದರು. ಅದನ್ನು ವಿರೋಧಿಸಲು ಚನ್ನಬಸಪ್ಪನವರು ಅನೇಕ ಯುವಕರನ್ನು ಸಂಘಟಿಸಿ, ಅವರಿಗೆ ಶಸ್ತ್ರಾಸ್ತ್ರಗಳಲ್ಲಿ ತರಬೇತಿ ಕೊಡಿಸಿದರು. ಆಗ ಅನೇಕ ಗಡಿಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದರು. ಚನ್ನಬಸಪ್ಪನವರು ಯಕ್ಕಂಚಿ ಶಿಬಿರದ ಉಸ್ತುವಾರಿಯನ್ನು ನೋಡಿಕೊಳ್ಳುತ್ತ ಮುಖ್ಯ ಕಛೇರಿಯಾದ ಸಿಂದಗಿ ಶಿಬಿರದೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು. ಅನೇಕ ರಜಾಕಾರರ ಹಾಗೂ ನಿಜಾಂ ಪೊಲೀಸ್ ಠಾಣೆಗಳ ಮೇಲೆ ಆಕ್ರಮಣ ಮಾಡಿ, ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು. ಕಕ್ಕಳಮೇಲಿ ಪೊಲೀಸ್ ಕಚೇರಿಯ ಮೇಲೆ ದಾಳಿ ಮಾಡಿ. ಅಲ್ಲಿಂದ ತಹಸೀಲ್ ಕಚೇರಿ, ಸುಂಕದ ನಾಕಾ, ಇವುಗಳ ಮೇಲೆಯೂ ದಾಳಿಮಾಡಿದರು. ಚನ್ನಬಸಪ್ಪನವರು ನಿಜಾಮನ ಅಧಿಕಾರಿಗಳಿಗೆ ಸಾಕಷ್ಟು ಕಿರುಕುಳ ಕೊಟ್ಟರು. ಇವರು ರಾತ್ರಿ ವೇಳೆಯಲ್ಲಿ ಒಂದು ಶಿಬಿರದಿಂದ ಇನ್ನೊಂದು ಶಿಬಿರಕ್ಕೆ ಸಾಗಿ ಕರ ಪತ್ರಗಳನ್ನು ಗುಪ್ತವಾಗಿ ಹಂಚುತ್ತಿದ್ದರು. ಪೋಲಿಸರು ಚನ್ನಬಸಪ್ಪನವರನ್ನು ಬಂಧಿಸಲು ಎಷ್ಟೇ ಪ್ರಯತ್ನಿಸಿದರೂ ಸಫಲರಾಗಲಿಲ್ಲ. ರಜಾಕಾರರಿಗೆ ಹಾಗೂ ನಿಜಾಂ ಪೋಲಿಸರಿಗೆ ದಾರಿ ತಪ್ಪಿಸುತ್ತ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವುದರಲ್ಲಿ ಚೆನ್ನಬಸವಪ್ಪನವರು ನಿಸ್ಸೀಮರೆಂದು ಹೆಸರು ಪಡೆದಿದ್ದರು.

ಕೆಂಬಾವಿ, ಯಡ್ರಾಮಿ, ಜೀವರಗಿ ಪೊಲೀಸ್ ಠಾಣೆಗಳಿಗೆ ಬೆಂಕಿ ಹಚ್ಚಿ, ಚೆನ್ನಬಸಪ್ಪನವರು ತಮ್ಮ ಸಾಹಸ ಕೃತ್ಯಗಳಿಂದ ಜನಪ್ರಿಯ ಹೋರಾಟಗಾರರಾದರು. ಒಂದು ಸಲ ಚನ್ನಬಸಪ್ಪನವರು ನಿಜಾಂ

ಪೋಲಿಸರ ವಿರುದ್ಧ ಮುಖಾಮುಖಿಯಾಗಿ ಹೋರಾಡುವ ಪ್ರಸಂಗದಲ್ಲಿ, ನಿಜಾಂ ಪೊಲೀಸ್ ಇವರ ಮೇಲೆ ಗುಂಡು ಹಾರಿಸಿದರು. ಅಂತಹ ಸಮಯದಲ್ಲಿ ಧೈರ್ಯಗೆಡದೆ ಆ ಗುಂಡಿನಿಂದ ತಪ್ಪಿಸಿಕೊಂಡು ಅವರ ವಿರುದ್ಧ ಹೋರಾಡಿದರು. ಚನ್ನಬಸಪ್ಪನವರ ಜೊತೆಗಾರರಾಗಿದ್ದ ಬಸವಂತರಾಯ ಪಂಡಿತ ಹಾಗೂ ಮಾಣ್ಣಿಕ ಎಂಬ ಹೋರಾಟಗಾರರು ನಿಜಾಂ ಪೋಲಿಸರ ವಿರುದ್ಧ ಗುಂಡುಹಾರಿಸಿದರು. ಆದರೆ ಮದ್ದು ಗುಂಡುಗಳ ಕೊರತೆಯಿಂದ ಚನ್ನಬಸಪ್ಪನವರು ಹೋರಾಟ ಮಾಡುವುದು ಸಾಧ್ಯವಾಗಲಿಲ್ಲ. ಕಲ್ಲು ಮುಳ್ಳಿನ ಹಂಗು ತೊರೆದು ಹೊಟ್ಟೆ ಹೊಸೆಯುತ್ತ ಅವರು ಖೈನೂರಿಗೆ ಬಂದದ್ದು ದೊಡ್ಡ ಸಾಹಸದ ಕಾರ್ಯವಾಗಿತ್ತು.* ಪೋಲಿಸರ ಗುಂಡೇಟಿನಿಂದ ಗಾಯಗೊಂಡ ಪಂಡಿತನನ್ನು ಗಂಡಾಂತರದ ಪರಿಸ್ಥಿತಿಯಲ್ಲಿ ಹೊತ್ತುಕೊಂಡು ಬಂದು ಊರು ಸೇರಿಸಿದ್ದು, ಚನ್ನಬಸಪ್ಪನವರ ಧೈರ್ಯ ಸಾಹಸಗಳನ್ನು ನೋಡಿದರೆ ಒಂದು ರೋಮಾಂಚಕ ಕಥೆ ಎನಿಸುತ್ತದೆ. ಚನ್ನಬಸಪ್ಪ ಕುಳಗೇರಿ ಅವರ ದೇಶಭಕ್ತಿ, ಅಭಿಮಾನ ಹಾಗೂ ಅವರ ವಿಚಾರಧಾರೆಗಳನ್ನು ನಾವು ನೋಡಿದರೆ ಅವರ ಶಕ್ತಿ ಮತ್ತು ದೇಶ ಸೇವೆಯ ಪರಿಚಯವಾಗುತ್ತದೆ. ಈಗ ಇವರು ಯಾದಗಿರಿಯಲ್ಲಿ ಸಮಾಜಸೇವೆ ಮಾಡುತ್ತಾ ನಿವೃತ್ತ ಜೀವನ ಸಾಗಿಸುತ್ತಿದ್ದಾರೆ.[೮]

## ೫.೮ ಶ್ರೀಪಾದರಾವ್ ಎಸ್. ಕುಲಕರ್ಣಿ

ಆಳಂದ ತಾಲೂಕಿನ ದಂಗಾಪುರ ಗ್ರಾಮದವರಾದ ಶ್ರೀ ಸಂಜೀವರಾವ್ ಮತ್ತು ತಾರಾಬಾಯಿ ಇವರ ಉದರದಲ್ಲಿ ದಿ.೨೦ನೇ ನವೆಂಬರ್ ೧೯೨೯ರಲ್ಲಿ ಶ್ರೀಪಾದರಾವ್ ಹುಟ್ಟಿದರು. ಅವರ ಪ್ರಾರಂಭಿಕ ಶಿಕ್ಷಣ ಧಂಗಾಪೂರ ಸಮೀಪದ ಭೂಸನೂರಿನಲ್ಲಾದರೆ, ಗುಲ್ಬರ್ಗಾದಲ್ಲಿ ಹೈಸ್ಕೂಲ್ ಶಿಕ್ಷಣವಾಯಿತು.

ಶ್ರೀಪಾದರಾವ್ ಅವರು ಉರ್ದು, ಮರಾಠಿ, ಸಂಸ್ಕೃತ ಭಾಷೆಗಳನ್ನು ಬಲ್ಲವರಾಗಿದ್ದರು. ಅಂದು ಉರ್ದುಭಾಷೆಯೇ ವ್ಯವಹಾರಿಕ ಆಡಳಿತ ಭಾಷೆಯಾಗಿತ್ತು. ಉರ್ದು ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುವ ಕಲೆ ಹೊಂದಿದ್ದರು. ೧೯೪೫ರಲ್ಲಿ ಇವರು ಹೈದರಾಬಾದ್ ಕೇಶವ ಸ್ಮಾರಕ ಆರ್ಯ ಪ್ರೌಢಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಅವರ ಗುರುಗಳು ದೇಶಭಕ್ತಿ, ಸ್ವಾತಂತ್ರ್ಯದ ಕುರಿತು ಕ್ರಾಂತಿಕಾರಕ ವಿಚಾರಗಳನ್ನು ಹೇಳುತ್ತಿದ್ದರು. ಇದನ್ನು ಕೇಳಿದ ವಿದ್ಯಾರ್ಥಿ ಶ್ರೀಪಾದರಾವರು, ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಲು ಕಾರಣವಾಯಿತು.

ಸುಭಾಸಚಂದ್ರಭೋಸ್, ತಿಲಕ್, ಭಗತ್‌ಸಿಂಗ್, ಅನೇಕ ಕ್ರಾಂತಿಕಾರಿ ಮುಖಂಡರ ಭಾಷಣಗಳನ್ನು ಕೇಳಿ ಶ್ರೀಪಾದರಾವ್ ಕುಲಕರ್ಣಿಯವರು ಪ್ರಭಾವಿತರಾದರು. ಶ್ರೀ ಪಾದರಾವ್ ರವರು ಮೆಟ್ರಿಕ್

ಓದುತ್ತಿದ್ದಾಗ ಅಂದರೆ ೧೯೪೭-೪೮ರಲ್ಲಿ ರಜಾಕಾರರ ಹಾವಳಿ ಹೆಚ್ಚಾಗಿತ್ತು. ಹಿಂದೂಗಳ ಮೇಲೆ ಅನೇಕ ರೀತಿಯ ದೌರ್ಜನ್ಯಗಳು ಹೆಚ್ಚಾಗತೊಡಗಿದವು. ಅದನ್ನು ನೋಡಿ ರಜಾಕಾರರ ವಿರುದ್ಧ ಶ್ರೀಪಾದರಾವ್‌ರವರು ಕ್ರಾಂತಿಕಾರಿಗಳಾಗಿ ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದರು. ಶ್ರೀಪಾದರಾವ್ ಅವರಿಗೆ ಪೋಟೋಗ್ರಾಫಿಯ ಬಗ್ಗೆ ಆಸಕ್ತಿ ಇತ್ತು. ಇದನ್ನು ಅವರ ಅಣ್ಣನವರಿಂದ ಕಲಿತಿದ್ದರು. ಊರು, ಊರುಗಳಿಗೆ ಹೋಗಿ ಅಲ್ಲಿ ನಡೆದ ಘಟನೆಗಳ ಬಗ್ಗೆ ತಿಳಿದು ಕೊಳ್ಳುತ್ತಿದ್ದರು. ರಜಾಕಾರರ ಹಾವಳಿಗೆ ಬಲಿಯಾದ ಭಯಾನಕ ದೃಶ್ಯಗಳನ್ನು ಶ್ರೀಪಾದರಾವ್ ಅವರು ಪೋಟೋ ತೆಗೆದುಕೊಂಡು ಹಳ್ಳಿಗಳಿಗೆ ಹೋಗಿ, ರಜಾಕಾರರ ಕ್ರೂರ ನಡವಳಿಕೆಯನ್ನು ತಿಳಿಸುತ್ತಿದ್ದರು.

ಶ್ರೀಪಾದರಾವ್ ಕಾಂಗ್ರೆಸ್ ಮುಖಂಡರಾದ ಹಣಮಂತರಾವ್ ಕಕ್ಕೇರಿ ಹಾಗೂ ದತ್ತಾತ್ರೇಯರಾವ್ ಅವರಾದಿಯವರ ಜೊತೆ ಕೂಡಿಕೊಂಡು ಕೆಲಸ ಮಾಡಿದರು. ಇವರು ಮಾಡಿದ ಸಾಹಸದ ಕೆಲಸವೆಂದರೆ, ೧೫ನೇ ಆಗಸ್ಟ್ ೧೯೪೭ರಂದು ಕಲಬುರ್ಗಿಯ ಸರಸ್ವತಿ ಗೋದಾಮಿನ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿದ್ದು, ಈ ಕೆಲಸ ಅಂದು ನಿಜಾಂ ಸರ್ಕಾರದಲ್ಲಿ ಸಾಹಸದ ಕೆಲಸವೇ ಆಗಿದ್ದಿತ್ತು. ಈ ಘಟನೆ ನಿಜಾಮ ಪೋಲಿಸರಿಗೆ ದಿಗ್ಭ್ರಮೆಗೊಳಿಸಿತು. ಆಗ ನಿಜಾಂನು ಅವರನ್ನು ಹಿಡಿಯಲು ಆದೇಶ ಹೊರಡಿಸಿದನು. ಬಂಧಿತರನ್ನು ಕಾರಾಗೃಹದಲ್ಲಿ ಇಡಲಾಗಿತ್ತು. ಸಾಹಸಿ ಶ್ರೀಪಾದರಾವ್‌ರವರು ಹೇಗೋ ತಪ್ಪಿಸಿಕೊಂಡು ಅವರ ಸ್ವಗ್ರಾಮ ಧಂಗಾಪುರಕ್ಕೆ ಮರಳಿ ಬಂದರು, ಮರಳಿ ಒಂದು ಊರ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಪಠಾಣರ ವಿರುದ್ಧ ಭೂಗತ ಕಾರ್ಯಚರಣೆ ಪ್ರಾರಂಭಿಸಿದರು. ಧಂಗಾಪುರ ಸಮೀಪ ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯ ಗಡಿಸೀಮೆಯಾದ ಧುದನಿ ಹಾಗೂ ಅರಜುಣಗಿ ಭಾಗದಲ್ಲಿ ಸ್ವಾತಂತ್ರ್ಯ ಯೋಧರು ಶಿಬಿರವನ್ನು ಸ್ಥಾಪಿಸಿದರು. ಅದಕ್ಕೆ ಧುದನಿ ಶಿಬಿರವೆಂದು ಕರೆದರು. ಈ ಶಿಬಿರದ ಮುಖಂಡತ್ವ ಶ್ರೀಗುರುಭೀಮರಾವ್ ಪಾಟೀಲರ ಅಧ್ಯಕ್ಷತೆಯಲ್ಲಿ ನಡೆಯುತ್ತಿತ್ತು. ಈ ಸಂದರ್ಭದಲ್ಲಿ ಶ್ರೀಪಾದರಾವರವರು ಧುದನಿ ಶಿಬಿರಕ್ಕೆ ಸೇರಿಕೊಂಡರು. ರಜಾಕಾರ ಹಾಗೂ ಪಠಾಣರ ವಿರುದ್ಧ ಹೋರಾಡಲು ನಿರತರಾದರು. ಶ್ರೀಪಾದರಾಯರು ತಮ್ಮ ಹೋರಾಟದ ಜೀವನದಲ್ಲಿ ಅನೇಕ ಸಲ ಸಾವಿನ ದವಡೆಯಿಂದ ಪಾರಾಗಿದ್ದರು. ವಿಮೋಚನಾ ಹೋರಾಟಕ್ಕೆ ಆರ್ಥಿಕ ಸಹಾಯ ನೀಡಿ ಅವರು ಒಳ್ಳೆಯ ಸಂಘಟಕರೆಂದು ಖ್ಯಾತಿ ಪಡೆದರು.

ಯಳಸಂಗಿ, ಮಾದನ ಹಿಪ್ಪರಗಾ-ರೇವೂರ್ ಮತ್ತು ನಿಂಬರ್ಗಾ ಮುಂತಾದ ಗ್ರಾಮಗಳಲ್ಲಿ ನಿಜಾಂರ ಹಾಗೂ ಪಠಾಣರ ವಿರುದ್ಧ ಹೋರಾಡಿ ಸಾಹಸಗಳನ್ನು ಪ್ರದರ್ಶಿಸಿದ್ದಾರೆ. ಆಗಿನ ನಿಜಾಮ ದೌರ್ಜನ್ಯದ ಅನೇಕ ಸುಂಕದ ಕಟ್ಟಡಗಳ ಮೇಲೆ ದಾಳಿ ಮಾಡಿ ನಿಜಾಂ ಪೋಲಿಸರಿಗೆ ಸಾಕಷ್ಟು ತಲೆ ನೋವು ಮಾಡಿದ್ದರು. ಹೀಗೆ ಅನೇಕ ಸಲ ಶ್ರೀಪಾದರಾವರವರನ್ನು ನಿಜಾಂನಿಂದ ಜೈಲುಶಿಕ್ಷೆ

ಅನುಭವಿಸಿ, ರಜಾಕಾರರ ಏಟಿಗೆ ತುತ್ತಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧೀರ ನಾಯಕರಾಗಿದ್ದಾರೆ ಎಂದು ಹೇಳಲಾಗಿದೆ.[೯]

## ೫.೯ ಗುರುಭೀಮರಾವ್ ಪಾಟೀಲ್ ಮಧುಗುಣಕಿ

ಗುರುಭೀಮರಾವ್ ಪಾಟೀಲ್‌ರು ಆಳಂದ ತಾಲ್ಲೂಕಿನ ಮಧುಗುಣಕಿ ಗ್ರಾಮದಲ್ಲಿ ೧೯೦೨ರಲ್ಲಿ ಜನಿಸಿದರು. ಇವರ ತಂದೆ ಬಸವಂತರಾವ್ ಪಾಟೀಲ್ ತಾಯಿ ತಾಯಬಾಯಿ. ಪಾಟೀಲರು ಪ್ರಾಥಮಿಕ ವಿಧ್ಯಾಭ್ಯಾಸವನ್ನು ಸ್ವಗ್ರಾಮದಲ್ಲಿ ಮುಗಿಸಿ, ಮಾಧ್ಯಮಿಕ ಶಾಲಾ ಅಭ್ಯಾಸವನ್ನು ಕೈಗೊಳ್ಳಲು ಮಾದನ ಹಿಪ್ಪರಗಾ ಎಂಬ ಗ್ರಾಮಕ್ಕೆ ತೆರಳಿದರು. ಅಲ್ಲಿ ಇವರಿಗೆ ಜಗನ್ನಾಥರಾವ್ ಎಂಬ ಗುರುಗಳು, ಹಿರಿಯ ಸ್ವಾತಂತ್ರ್ಯ ಹೋರಾಟಗಾರರ ಕಥೆಗಳನ್ನು ಹೇಳುತ್ತಾ, ವಿದ್ಯಾರ್ಥಿಗಳಿಗೆ ಧೈರ್ಯ, ಸಾಹಸ ತುಂಬುತ್ತಿದ್ದರು. ಇವರಿಂದ ಪ್ರೇರಣೆಗೊಳಗಾಗಿ ಗುರುಭೀಮರಾವ್ ಪಾಟೀಲರು ಸಹ, ವಿದ್ಯಾರ್ಥಿ ಜೀವನದಲ್ಲಿಯೇ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕ್ಕಿದರು. ಗುರುಭೀಮರಾವ್ ಪಾಟೀಲರು ತ್ರಿವರ್ಣ ಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿರುವಾಗ, ಬ್ರಿಟಿಷ್ ಸರಕಾರದ ಪೋಲಿಸರು ಅವರನ್ನು ಹಿಡಿದು ಊರ ಜನರ ಸಮ್ಮುಖದಲ್ಲಿ ಹೊಡೆದರು. ಆದರೆ ಪಾಟೀಲರು ಧೈರ್ಯ ಗುಂದದೆ ಕೈಯಲ್ಲಿದ್ದ ತ್ರಿವರ್ಣ ಧ್ವಜವನ್ನು ಮತ್ತೆ ಮೇಲೆ ಎತ್ತಿ ಹಿಡಿದರು ಇದರಿಂದ ಕೋಪಗೊಂಡ ಪೊಲೀಸ್ ಅಧಿಕಾರಿ ಇವರನ್ನು ಸೆರೆಮನೆಗೆ ಹಾಕಿದರು. ಕೆಲವು ದಿನಗಳ ನಂತರ ಇವರನ್ನು ಬಿಡುಗಡೆ ಮಾಡಲಾಯಿತು.

ಇದರ ಪರಿಣಾಮ ಗುರುಭೀಮರಾವ್ ಪಾಟೀಲರು ಓದಿಗೆ ಶರಣು ಹೊಡೆದು, ಸ್ವಾತಂತ್ರ್ಯ ಚಳುವಳಿಯಲ್ಲಿ ಹೋರಾಡಲು ಪ್ರಾರಂಭಿಸಿದರು. ಅನೇಕ ಸೆರೆ, ಜೈಲುವಾಸ ಮುಂತಾದ ಶಿಕ್ಷೆಗಳನ್ನು ಅನುಭವಿಸುತ್ತಲೇ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡಿದರು. ಹಲವು ಚಳುವಳಿಯಲ್ಲಿ ಭಾಗಿಯಾಗಿ ತಮ್ಮ ದೇಶ ಪ್ರೇಮವನ್ನು ಹೆಚ್ಚಿಸಿಕೊಂಡರು. ಭಾರತ ಸ್ವಾತಂತ್ರ್ಯಗೊಂಡ ನಂತರ ೧೯೪೭-೪೮ರಲ್ಲಿ ಮತ್ತೆ ನಿಜಾಂ ಸರಕಾರದ ವಿರುದ್ಧ ಹೋರಾಡಲು ಸಿದ್ಧರಾದರು. ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿ ಭೂಗತ ಕಾರ್ಯಚರಣೆಗಳನ್ನು ಕೈಗೊಂಡರು. ಗುರುಭೀಮರಾವ್ ಪಾಟೀಲ್ ಮತ್ತು ಶಿವಲಿಂಗಪ್ಪ, ಮಲಕಾಜಪ್ಪ ಜೀವೂರ ಅನೇಕ ವಿಮೋಚನಾ ಹೋರಾಟಗಾರರು ಸೇರಿ ಧುದನಿ ಶಿಬಿರವನ್ನು ಸ್ಥಾಪಿಸಿದ್ದರು. ಈ ಶಿಬಿರದಲ್ಲಿ ಅನೇಕ ಯುವಕರಿಗೆ ಶಸ್ತ್ರಾಸ್ತ್ರಗಳ ತರಬೇತಿ ಕೊಡತ್ತಿದ್ದರು. ಗುರುಭೀಮರಾವ್‌ರವರ ನೇತೃತ್ವದಲ್ಲಿ ಅನೇಕ ಗ್ರಾಮಗಳು ರಜಾಕಾರರ ದೌರ್ಜನ್ಯದಿಂದ ಮುಕ್ತಿಗೊಂಡವು.

ರಜಾಕಾರರ ಮುಖಂಡನಾದ ಕಾಸಿಂ ರಜ್ವಿ, ಗುರುಭೀಮರಾವ್‌ರವರನ್ನು ಕೊಲ್ಲಲು ಅನೇಕ ರೀತಿಯ ಕುತಂತ್ರಗಳನ್ನು ಮಾಡಿದನು. ಆದರೂ ಪಾಟೀಲರು ಸಾವಿನ ದವಡೆಯಿಂದ ಪಾರಾಗಿ ಅವರ

ವಿರುದ್ಧ ಹೋರಾಡಿದರು. ರಜಾಕಾರರು ಮಾದನ ಹಿಪ್ಪರಗಾ ಎಂಬ ಗ್ರಾಮದ ಮೇಲೆ ದಾಳಿಮಾಡಿದಾಗ, ಧುದನಿ ಶಿಬಿರದ ಕಾರ್ಯಕರ್ತರು ಸೇರಿ ರಜಾಕಾರರನ್ನು ಓಡಿಸಲು ಹೋರಾಡಿದರೂ, ಗುರುಭೀಮರಾವ್ ಪಾಟೀಲರು ಮಾತ್ರ ರಜಾಕಾರರ ಗುಂಪಿನಲ್ಲಿ ಸಿಕ್ಕಿಬಿದ್ದರು. ಧೈರ್ಯ ಬಿಡದೇ ಅವರ ಮೇಲೆ ಗುಂಡುಹಾರಿಸುತ್ತ ಒಂದು ಕಿ.ಮೀಟರ್ ದೂರದವರೆಗೆ ನೆಲದ ಮೇಲೆ ಹೊಟ್ಟೆಯನ್ನು ತೆವಳಿಕೊಂಡು ಸಾಗಿ ಆ ದುರ್ಘಟನೆಯಿಂದ ಪಾರಾದರು. ಊರಜನರೆಲ್ಲರು ಪಾಟೀಲರು ಸತ್ತರೆಂದು ತಿಳಿದು ಹೆಣವನ್ನು ಹುಡುಕುತ್ತಿದ್ದರು. ಎರಡು ದಿನಗಳ ನಂತರ ಗುರುಭೀಮರಾವ್ ಪಾಟೀಲರು ಮರಳಿ ಬಂದಿದ್ದನ್ನು ಕಂಡು ಊರ ಜನರೆಲ್ಲರು ಆಶ್ಚರ್ಯಪಟ್ಟರು. ಹೀಗೆ ಸಾಹಸ ಬದುಕಿನಲ್ಲಿ ಹಾಗೂ ಸ್ವಾತಂತ್ರ್ಯ ಬದುಕಿನಲ್ಲಿ ದೇಶಕ್ಕಾಗಿ ಹೋರಾಡಿದ ಧೀರನಾಯಕ ಗುರುಭೀಮರಾವ್ ಪಾಟೀಲರು ೧೧-೧-೨೦೦೨ರಂದು ಸ್ವರ್ಗವಾಸವಾದರು.

### ೫.೧೦ ಮಲಕಾಜಪ್ಪಾ ಮಲ್ಲಯ್ಯಾ ಜೀವೂರ

ಮಲಕಾಜಪ್ಪಾ ಜೀವೂರ ಆಳಂದ ತಾಲೂಕಿನ ಮಾದನಹಿಪ್ಪರಗಾದವರು. ತಂದೆ ಮಲ್ಲಯ್ಯ, ತಾಯಿ ಸಾವಿತ್ರವ್ವ ಮಲ್ಲಯ್ಯ ಜೀವೂರರವರ ಉದರದಲ್ಲಿ ದಿನಾಂಕ ೧೧-೩-೧೯೨೮ರಲ್ಲಿ ಹುಟ್ಟಿದರು. ಅವರ ಪ್ರಾರಂಭಿಕ ಶಿಕ್ಷಣ ಮಾದನಹಿಪ್ಪರಗಾದಲ್ಲಿ ನಡೆಯಿತು. ನಿಜಾಂ ಆಡಳಿತದಲ್ಲಿದ್ದ ಈ ಪ್ರದೇಶವು ಉರ್ದು ಭಾಷೆಗೆ ಪ್ರಸಿದ್ಧವಾಗಿತ್ತು. ಅದಕ್ಕಾಗಿ ಇವರ ಪ್ರಾಥಮಿಕ ವಿದ್ಯಾಭ್ಯಾಸ ಉರ್ದುವಿನಲ್ಲಿ ನಡೆಯಿತು. ಮಲಕಾಜಪ್ಪಾನವರು ಕೇವಲ ನಾಲ್ಕನೇ ತರಗತಿ ಕಲಿತು. ಮರಾಠಿ, ಉರ್ದು, ಹಾಗೂ ಮೋಡಿ ಭಾಷೆಯನ್ನು ಬಲ್ಲವರಾಗಿದ್ದರು. ಮಲ್ಲಕಾಜಪ್ಪಾನವರ ಗುರುಗಳಾದ ಲಿಂಗರಾಜದೇಗಿನ್‌ರವರು ವಿದ್ಯಾರ್ಥಿಗಳಿಗೆ ದೇಶಭಕ್ತಿ ಹಾಗೂ ಮಹಾನ್ ನಾಯಕರ ವಿಚಾರಗಳನ್ನು ಹೇಳುತ್ತಿದ್ದರು. ಇದರಿಂದ ಪ್ರೇರಿತರಾದ ಜೀವೂರರು ನಿಜಾಂನ ಹಾಗೂ ಅವರ ಅನುಯಾಯಿಗಳ ಕೆಟ್ಟ ನೀತಿಯನ್ನು ಎದುರಿಸಲು ಸಿದ್ಧರಾದರು. ಹಿಂದೂಗಳಿಗೆ ಅದರಲ್ಲಿ ಹೆಣ್ಣು ಮಕ್ಕಳಿಗೆ ಪಠಾಣರು ಅನೇಕ ತೊಂದರೆಗಳನ್ನು ಕೊಡುತ್ತಿದ್ದರು. ಹಾಡು ಹಗಲಲ್ಲೇ ಹೆಣ್ಣು ಮಕ್ಕಳನ್ನು ಪೀಡಿಸುವ ದೃಷ್ಟ ಕೃತ್ಯಗಳು ಇವರ ಮನಸ್ಸಿನ ಮೇಲೆ ಆಗಾಧ ದುಃಖವನ್ನುಂಟು ಮಾಡಿದವು. ನಿಜಾಂ ಪೊಲೀಸ್ ಹಾಗೂ ರಜಾಕಾರರು ಜನರಿಗೆ ಕೊಡುತ್ತಿರುವ ತೊಂದರೆಗಳನ್ನು ನೋಡಿ ಇವರಿಗೆ ಸಹಿಸದಾಯಿತು. ಮಾದನ ಹಿಪ್ಪರಗಾ ಗ್ರಾಮದಲ್ಲಿ ಕೇಲ ಯುವಕರನ್ನು ಸಂಘಟಿಸಿ ಜನಜಾಗೃತಿಕಾರ್ಯ ಕ್ರಮಗಳನ್ನು ಕೈಕೊಂಡರು. ಜನರನ್ನು ಹುರಿದುಂಬಿಸಿ ನಿಜಾಂನ ವಿರುದ್ಧ ದಂಗೆ ಏಳುವಂತೆ ಮಾಡಿದರು. ರಾಷ್ಟ್ರಪ್ರೇಮ ಹಾಗೂ ಸ್ವಾಭಿಮಾನದ ಭಾವನೆಗಳನ್ನು ಜನರಲ್ಲಿ ಮೂಡಿಸಿದರು. ತನು, ಮನ, ಧನಗಳನ್ನು ದೇಶಕ್ಕೆ ಅರ್ಪಿಸಿ, ಜೀವದಾಸೆಯನ್ನು ಬಿಟ್ಟು ಹೋರಾಟಕ್ಕೆ ನಿಂತರು. ಮನೆ, ಮಠಗಳನ್ನು

ಬಿಟ್ಟು ಹೆಂಡರು-ಮಕ್ಕಳನ್ನು ತಬ್ಬಲಿಯನ್ನಾಗಿ ಮಾಡಿದರೂ ಚಿಂತಿಸದೆ ನಿಜಾಂನ ಆಳ್ವಿಕೆಯನ್ನು ಕೊನೆಗೊಳಿಸುವುದೇ ಇವರ ಏಕೈಕ ಗುರಿಯಾಗಿತ್ತು.

ಈ ಬೃಹತ್ ಸಮಯೋಚಿತ ಉದ್ದೇಶದ ಸಾಧನೆಗಾಗಿ ೧೯೪೭ನೇ ಇಸ್ವಿಯಲ್ಲಿ ಕಲಬುರ್ಗಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾದ ಶ್ರೀಬಾವುರಾವ ದೇವಳಗಾಂವಕರ ಇವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ಏರ್ಪಡಿಸಿದರು. ಈ ಸಭೆಗೆ ಸರಕಾರದ ಅನುಮತಿ ಇಲ್ಲವೆಂಬ ಕಾರಣದ ಮೇಲೆ ಸ್ಥಳೀಯ ನಿಜಾಂ ಪೋಲಿಸರು ಇವರ ಮೇಲೆ ಕೇಸು ದಾಖಲುಮಾಡಿಕೊಂಡು ಇವರ ಮೇಲೆ ವಾರೆಂಟ್ ಜಾರಿ ಮಾಡಿದನು. ಸ್ವಾತಂತ್ರ್ಯ ಚಳುವಳಿ ಯಶಸ್ವಿಯಾಗುವ ತನಕ ಈ ವಾರಂಟ್ ಜಾರಿಯಲ್ಲಿತ್ತು ದಿನಾಂಕ ೭-೮-೧೯೪೭ರಂದು ಆಗಿನ ಹೈದರಾಬಾದ್ ರಾಜ್ಯ ಕಾಂಗ್ರೆಸ್ ಕಮೀಟಿಯ ಅಧ್ಯಕ್ಷರಾಗಿದ್ದ ರಮಾನಂದತೀರ್ಥರ ಆಜ್ಞೆಯ ಮೇರೆಗೆ ಪ್ರಭಾತ ಫೇರಿ ಚಳುವಳಿ ಮತ್ತು ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿದರು. ಇದಾದ ಮೂರನೆಯ ದಿವಸ ಹೈದರಾಬಾದ್ ನಿಜಾಂ ಸರಕಾರ ಇವರನ್ನೆಲ್ಲ ಬಂಧಿಸಲು ಆಜ್ಞೆ ಹೊರಡಿಸಿತು. ಇದನ್ನರಿತ ಇವರು ನಿಜಾಂ ಸರಕಾರದ ವಶಕ್ಕೆ ಸಿಗದೆ, ವಿಜಾಪುರ ಜಿಲ್ಲೆಯ ಸಿಂದಗಿಗೆ ಹೋದರು. ಅಲ್ಲಿ ಸರದಾರ ಶರಣಗೌಡ ಪಾಟೀಲ ಇನಾಮದಾರ ಇವರ ನೇತೃತ್ವದಲ್ಲಿ ಶಿಬಿರವನ್ನು ಸ್ಥಾಪಿಸಿದರು. ಮುಂದೆ ೫-೮-೧೯೪೭ರಂದು ಕಲಬುರ್ಗಿ ಜಿಲ್ಲೆಯ ಅರಳಗುಂಡಿಯಲ್ಲಿರುವ ಕರೋಡಗಿ ನೌಕಾದ ಮೇಲೆ ದಾಳಿಮಾಡಿ, ಅಲ್ಲಿದ್ದ ಹಣವನ್ನು ಅಪಹರಿಸಿ ನಾಕಾಗೆ ಬೆಂಕಿ ಹಚ್ಚಿದರು. ೧೫-೧೨-೧೯೪೭ರಂದು ಕಕ್ಕಳಮೇಲಿ ಗ್ರಾಮದ ಪೊಲೀಸ್ ಠಾಣೆಯ ಮೇಲೆ ರಾತ್ರಿದಾಳಿ ನಡೆಸಿ, ಇಬ್ಬರು ನಿಜಾಂ ಪೊಲೀಸರನ್ನು ಕೊಂದರು. ಹೀಗೆ ನಿಜಾಂ ಹಾಗೂ ರಜಾಕಾರರ ವಿರುದ್ಧ ಸತತವಾಗಿ ಹೋರಾಡಿ ಅನೇಕ ಸಲ ಜೈಲು ವಾಸವನ್ನು ಅನುಭವಿಸಿದರು. ಮಲಕಾಜಪ್ಪಾ ಜೀವೂರವರು ಹೈದರಾಬಾದ್ ಕರ್ನಾಟಕದ ವಿಮೋಚನಾ ಹೋರಾಟದಲ್ಲಿ ಹೋರಾಡಿ ಸ್ವಾತಂತ್ರ್ಯ ಸೇನಾನಿಯಾದರು. ಮಲಕಾಜಪ್ಪಾ ಜೀವೂರರವರು ನೇಕಾರರಾಗಿದ್ದು, ಕೆಲವು ವರ್ಷಗಳಕಾಲ ಬಟ್ಟೆಯನ್ನು ನೇಯುತ್ತಿದ್ದರು. ಆಧುನಿಕ ವಸ್ತ್ರಾಲಂಕಾರಕ್ಕೆ ಜನರು ಮಾರುಹೋದುದರಿಂದ ಮಲಕಾಜಪ್ಪ ನವರ ನೇಕಾರಿಕೆ ನಿಂತುಹೋಯಿತ್ತು. ಈಗ ಅವರು ತಮ್ಮ ಹೊಲದಲ್ಲಿ ಬೇಸಾಯಮಾಡಿ ಜೀವನ ಸಾಗಿಸುತ್ತಿದ್ದಾರೆ.[೧೧]

## ೫.೧೧ ಸರ್ದಾರ್ ಶರಣಗೌಡ ಪಾಟೀಲ ಇನಾಮದಾರ

ಸರ್ದಾರ್ ಶರಣಗೌಡ ಪಾಟೀಲರು ಜೀವರಗಿ ತಾಲ್ಲೂಕಿನ ದಮ್ಮದ್ರ ಎಂಬ ಗ್ರಾಮದಲ್ಲಿ ೧೯೨೦ರಲ್ಲಿ ಜನಿಸಿದರು. ಇವರು ಪ್ರಾಥಮಿಕ ಶಿಕ್ಷಣವನ್ನು ಜೀವರಗಿಯಲ್ಲಿ ಆರಂಭಿಸಿ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಕಲುಬುರ್ಗಿಯಲ್ಲಿ ಮುಂದುವರಿಸಿದರು. ಆಗ ಇವರ ಗುರುಗಳಾದ ಧಾರವಾಡಕರ

ಎಂಬುವವರು ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯದ ಪ್ರಜ್ಞೆ ಮೂಡಿಸುತ್ತಿದ್ದರು. ಇವರ ಸ್ಫೂರ್ತಿಯಿಂದ ಶರಣಗೌಡ ಪಾಟೀಲರು ವಿದ್ಯಾರ್ಥಿ ಒಕ್ಕೂಟದಿಂದ ನಿಜಾಂ ಶಿಕ್ಷಣ ವ್ಯವಸ್ಥೆಯನ್ನು ಖಂಡಿಸಿದರು. ಈ ವಿದ್ಯಾರ್ಥಿ ಸಂಘಗಳಿಗೆ ಆರ್ಯಸಮಾಜ ಬೆನ್ನೆಲುಬಾಗಿ ನಿಂತು ವಿದ್ಯಾರ್ಥಿಗಳ ಕುಂದುಕೊರತೆಗಳನ್ನು ವಿಚಾರಿಸುತ್ತಿತ್ತು. ಆಗ ವಿದ್ಯಾರ್ಥಿಗಳ ಮುಖಂಡನಾದ ಶರಣಗೌಡ ಪಾಟೀಲರನ್ನು ನಿಜಾಂ ಸರಕಾರ ಬಂಧಿಸಿತು. ಮುಂದೆ ಕೆಲ ದಿನಗಳ ನಂತರ ಇವರನ್ನು ಬಿಡುಗಡೆ ಮಾಡಲಾಯಿತು. ಬಿಡುಗಡೆ ಹೊಂದಿದ ನಂತರ ಶರಣಗೌಡರು ಮರಳಿ ಊರಿಗೆ ಹೋಗದೆ "ವಂದೇ ಮಾತರಂ" ಚಳುವಳಿಯಲ್ಲಿ ಪಾಲ್ಗೊಂಡರು. ಅವರ ಗುರುಗಳಾದ ಧಾರವಾಡಕರ್ ಅವರ ಮುಖಂಡತ್ವದಲ್ಲಿ ವಂದೇ ಮಾತರಂ ಚಳುವಳಿ ತೀವ್ರಗತಿಯಲ್ಲಿ ಮುಂದುವರಿಯಿತು. ಆಗ ನಿಜಾಂ ಪೋಲೀಸ್ ಅಧಿಕಾರಿಗಳು ಶರಣಗೌಡ ಪಾಟೀಲ ಹಾಗೂ ಗುರುಗಳಾದ ಧಾರವಾಡಕರ್‌ರವರನ್ನು ಕೆಲ ಗಂಟೆಗಳ ಕಾಲ ಬಂಧಿಸಿದರು. ಮುಂದೆ ಬಿಡುಗಡೆ ಹೊಂದಿದ ಶರಣಗೌಡರು ತಮ್ಮ ಸಂಗಡಿಗರ ಜೊತೆ ಸೇರಿ ನಿಜಾಂನ ವಿರುದ್ಧ ಚಳುವಳಿಗಳನ್ನು ಕೈಗೊಂಡರು.

ಸ್ವಾತಂತ್ರ್ಯ ಚಳುವಳಿಯ ಉಗ್ರಗಾಮಿ ಹೋರಾಟಗಾರರಾದ ಸುಭಾಸಚಂದ್ರ ಬೋಸರವರು ಮುಂಬೈಯಿಂದ ಮದ್ರಾಸಿಗೆ ಹೋಗುತ್ತಿದ್ದಾಗ ಮಾರ್ಗದಲ್ಲಿ ಬರುವ ವಾಡಿ ಜಂಕ್ಷನ್‌ನಲ್ಲಿ ಶರಣಗೌಡ ಪಾಟೀಲರು ಹಾಗೂ ಕೆಲ ಯುವಕರು ಸಭೆ ಸೇರಿ ಅವರಿಗೆ ಹೈದ್ರಾಬಾದ್ ಕರ್ನಾಟಕದ ಭಾಗದ ಜನರ ಪರಿಸ್ಥಿತಿಯನ್ನು ತಿಳಿಸಿದರು. ಆಗ ಸುಭಾಸಚಂದ್ರ ಬೋಸರವರು ಈ ಭಾಗದ ಜನತೆಗೆ ಧೈರ್ಯ ಹೇಳಿ ನಿಜಾಂನ ವಿರುದ್ಧ ಹೋರಾಟ ಮುಂದುವರಿಸಲು ಹೇಳಿದರು. ೧೯೪೫ರಲ್ಲಿ ಸುರಪುರದಲ್ಲಿ ಅಣ್ಣಾರಾವ ಗಣಮುಖಿ ಅವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿ, ಮುಂದೆ ಕಲಬುರ್ಗಿ ಜಿಲ್ಲೆಯ ಡಿ.ಸಿ.ಸಿ.ಕಾರ್ಯದರ್ಶಿಯಾದರು. ೧೬.೦೬.೧೯೪೮ರಲ್ಲಿ ನಡೆದ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್‌ನ ಶಾಂತಿಯುತ ಚಳುವಳಿ ಉಪಯೋಗವಿಲ್ಲವೆಂದು ಶರಣಗೌಡರು ಕರ್ನಾಟಕ ಕಾನ್ಫರೆನ್ಸ್‌ದ ಅಧ್ಯಕ್ಷತೆವಹಿಸಿದ್ದ ಅಣ್ಣಾರಾವ್ ಗಣಮುಖಿಯವರಿಗೆ ಹೇಳಿದರು. ಹೈದರಾಬಾದ್ ಕರ್ನಾಟಕದ ಭಾಗವಾದ ಕಲಬುರ್ಗಿ ಜಿಲ್ಲೆಯ ಅನೇಕ ಭಾಗಗಳಲ್ಲಿ ರಜಾಕಾರರ ದೌರ್ಜನ್ಯಗಳು ತುಂಬಾ ಹೆಚ್ಚಾಗಿದ್ದವು. ಇದನ್ನರಿತ ಶರಣಗೌಡರು ಗದಗದ ಖ್ಯಾತ ಸ್ವಾತಂತ್ರ್ಯಯೋಧರಾದ ಅನಂತರಾವ್ ಜಾಲಿಹಾಳ್ ಅವರನ್ನು ಭೇಟಿಯಾಗಿ ಅವರ ಮನೆಯಲ್ಲಿ ರಜಾಕಾರರ ವಿರುದ್ಧ ಹೋರಾಡಲು ಒಂದು ಕಛೇರಿಯನ್ನು ತೆಗೆದರು. ರಜಾಕಾರರಿಂದ ಗಡಿಭಾಗಗಳಲ್ಲಿ ಅನೇಕ ಕೊಲೆ, ಸುಲಿಗೆ, ಅತ್ಯಾಚಾರಗಳು ನಡೆದಿದ್ದವು. ಶರಣಗೌಡ ಪಾಟೀಲರು ಮುಂಬೈ ಕರ್ನಾಟಕದಲ್ಲೆಲ್ಲ ಸಂಚರಿಸಿ ಹೈದರಾಬಾದ್ ಕರ್ನಾಟಕ ಜನರನ್ನು ನಿಜಾಂನಿಂದ ಮುಕ್ತಿಗೊಳಿಸಲು

ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ಬೀದರ್, ಸೊಲ್ಲಾಪುರ, ವಿಜಾಪೂರ, ರಾಯಚೂರು ಜಿಲ್ಲೆಗಳಲ್ಲಿ ಗಡಿಶಿಬಿರಗಳು ಆರಂಭವಾದವು. ಸೊಲ್ಲಾಪುರ ಶಿಬಿರದ ವ್ಯವಸ್ಥೆಗಾಗಿ ಜಯದೇವಿತಾಯಿ ಲಿಗಾಡೆ, ಬಾಬಾಸಾಹೇಬವಾರದ ಇವರೆಲ್ಲರು ನೆರವು ಒದಗಿಸಿದರು. ಇದೇ ರೀತಿ ಬಿಜಾಪುರದಲ್ಲಿ ಮುರಿಗೆಪ್ಪ ಸುಗಂಧಿ, ರಾಜಾರಾಮ ದುಬೆ ಮುಂತಾದ ಸ್ವಾತಂತ್ರ್ಯ ಪ್ರೇಮಿಗಳು ಇವರಿಗೆ ಬೆಂಬಲ ನೀಡಿದರು. ತಾಳಿಕೋಟೆ, ಧುದನಿಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದರು.

ರಜಾಕಾರರ ದೌರ್ಜನ್ಯಗಳ್ನ ತಡೆಗಟ್ಟಲು ಕಲಬುರ್ಗಿ ಜಿಲ್ಲೆಯ ಗಡಿಭಾಗವಾದ ಸಿಂದಗಿಯಲ್ಲಿ ಶಿಬಿರವೊಂದನ್ನು ಸ್ಥಾಪಿಸಿಸಲಾಯಿತು. ಇದರ ಮುಖಂಡತ್ವವನ್ನು ಸರದಾರ್ ಶರಣಗೌಡ ಪಾಟೀಲರು ವಹಿಸಿಕೊಂಡರು. ಬಿಜಾಪುರ ಜಿಲ್ಲೆಯ ಗಡಿಭಾಗಗಳಾದ ಕಕ್ಕಳಮೇಲಿ, ಮಾಡಬಾಳಗಳನ್ನು ರಜಾಕಾರರ ಹಾವಳಿಯಿಂದ ಮುಕ್ತಿಗೊಳಿಸಿದರು. ನಿಜಾಂ ಸರಕಾರದ ದರ್ಪ ಆಡಳಿತವನ್ನು ವಿರೋಧಿಸುತ್ತ ಅವರ ಅನೇಕ ಕಚೇರಿಗಳನ್ನು ಶರಣಗೌಡ ಪಾಟೀಲರು ಸುಟ್ಟು ಹಾಕಿದರು. ಹೀಗೆ ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿ ಹೈದರಾಬಾದ್ ಕರ್ನಾಟಕವನ್ನು ನಿಜಾಂನಿಂದ ಮುಕ್ತಿಗೊಳಿಸಿದರು. ಸ್ವಾತಂತ್ರ್ಯನಂತರವೂ ಕಾರ್ಮಿಕ ವರ್ಗಗಳ ಕ್ಷೇತ್ರಗಳಲ್ಲಿ ದುಡಿದು ಅನೇಕ ಪ್ರಗತಿಪರ ಕೆಲಸಗಳನ್ನು ಶರಣಗೌಡರು ಮಾಡಿದರು. ಜೀವರ್ಗಿ ತಾಲ್ಲೂಕಿನಿಂದ ಮೂರುಸಲ ವಿಧಾನಸಭೆಗೆ ಆಯ್ಕೆಗೊಂಡು ಸಾರ್ವಜನಿಕ ಸೇವೆ ಮಾಡಿದರು. ಹೀಗೆ ಧೀರ ನಾಯಕರಾಗಿ ಹೋರಾಡಿ ತಮ್ಮ ಜೀವನವನ್ನು ಸದಾ ಹೋರಾಟಕ್ಕೆ ಮುಡುಪಾಗಿಟ್ಟ ಶರಣಗೌಡ ಪಾಟೀಲರು ಪ್ರಸ್ತುತ ಕಲಬುರ್ಗಿ ಜಿಲ್ಲೆಯಲ್ಲಿ ಸಮಾಜ ಸೇವೆ ಮಾಡುತ್ತಾ ಕಾಲ ಕಳೆಯುತ್ತಿದ್ದಾರೆ.[೨೨]

ಕ್ರಿ.ಶ.೧೯೪೭ ನಂತರ ಹೈದರಾಬಾದ್ ನಿಜಾಂನು ಈ ಪ್ರಾಂತ್ಯವನ್ನು ಸ್ವತಂತ್ರ ಮುಸ್ಲಿಂ ರಾಷ್ಟ್ರವನ್ನಾಗಿ ಉಳಿಸಿಕೊಳ್ಳಬೇಕೆಂಬ ಆಸೆಯಿಂದ, ರಜಾಕಾರರ ಮುಖಂಡನಾದ ಕಾಸಿಂ ರಜ್ವಿಯ ಕೈಗೊಂಬೆಯಾಗಿ ಜಾತಿ ಆಧಾರಿತ ಆಡಳಿತ ನಡೆಸತೊಡಗಿದನು. ಆ ಸಂದರ್ಭದಲ್ಲಿ ಮಹಿಳೆಯರ ಮೇಲೆ ಅತ್ಯಾಚಾರ, ಕೊಲೆ, ಸುಲಿಗೆಯಂತಹ ರಕ್ತಪಾತದ, ಕ್ರೂರವಾದ ಅನೇಕ ಘಟನೆಗಳು ಸಂಭವಿಸಿದವು. ಇದನ್ನು ಕಂಡ ಈ ಭಾಗದ ಹೋರಾಟಗಾರರಾದ ಜಗನ್ನಾಥರಾವ ಚಂಡ್ರಿಕಿ, ಗುರುಭೀಮರಾವ್ ಪಾಟೀಲ, ಡಿ.ಬಿ.ಕಲ್ಮಣಕರ್, ರಮಾನಂದತೀರ್ಥ, ಸರದಾರ್ ಶರಣಗೌಡ ಪಾಟೀಲಇನಾಮದಾರ್, ಮಲಕಾಜಪ್ಪಜೀವೂರ, ಭೈರಪ್ಪ ಭೂಸನೂರ, ವಿದ್ಯಾಧರ ಗುರೂಜಿ, ಶ್ರೀಪಾದರಾವ ಕುಲಕರ್ಣಿ, ಅಣ್ಣಾರಾವ್ ಪಾಟೀಲ, ಮುಂತಾದ ವಿಮೋಚನಾ ಹೋರಾಟಗಾರರು ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಲು ನಿಂತರು. ರಜಾಕಾರರ ಕಛೇರಿಗಳನ್ನು ಸುಟ್ಟು ಪಠಾಣರ ವಸತಿಗಳ ಮೇಲೆ ದಾಳಿಮಾಡಿ ಅವರನ್ನು ಕೊಂದರು. ಅನೇಕ ಯುವಕರು ಸೇರಿ ಗಡಿಶಿಬಿರಗಳನ್ನು

ಸ್ಥಾಪಿಸಿದರು. ಶಿಬಿರದಲ್ಲಿದ್ದ ಯುವಕರು ರಜಾಕಾರರ ಹಾಗೂ ನಿಜಾಂ ಪೊಲೀಸ್‌ರಿಗೆ ಸಿಂಹ ಸ್ವಪ್ನರಾದರು. ಭಾರತದ ರಾಷ್ಟ್ರೀಯ ನಾಯಕರ ಪ್ರೇರಣೆ ಪಡೆದ ಹೈದರಾಬಾದ್ ಕರ್ನಾಟಕದ ಹೋರಾಟಗಾರಾರು ನಿಜಾಂನಿಗೆ ಹೆದರದೆ ಮರು ಉತ್ತರ ಕೊಟ್ಟರು. ಈ ಹೋರಾಟದಲ್ಲಿ ಅನೇಕ ಹೋರಾಟಗಾರರು ತಮ್ಮ ಮನೆ ಆಸ್ತಿ, ಹಾಗೂ ಪ್ರಾಣಗಳನ್ನು ಕಳೆದುಕೊಂಡರು ಕೊನೆಗೆ ಭಾರತ ಸರಕಾರದ ಸೈನ್ಯದ ಕಾರ್ಯಚರಣೆಯಿಂದ ಶರಣಾಗತಿ ಹೊಂದಿದ ನಿಜಾಂ ಸರಕಾರವು ಭಾರತ ಒಕ್ಕೂಟಕ್ಕೆ ಸೇರ್ಪಡೆಯಾಯಿತು. ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕಲುಬುರ್ಗಿ ಜಿಲ್ಲೆಯ ಅನೇಕ ಭಾಗದ ಯುವಕರು, ನಿಜಾಂನ ವಿರುದ್ಧ ಎಲೆ ಮರೆಯ ಕಾಯಿಯಂತೆ ಹೋರಾಡಿ ತಮ್ಮ ದೇಶ ಸೇವೆಯನ್ನು ಸಲ್ಲಿಸಿದ್ದಾರೆ. ಈ ಹೋರಾಟದಲ್ಲಿ ಶರಣಪ್ಪ ದೊಡ್ಡಮನಿ, ಹಸನಪ್ಪ ದೊಡ್ಡಮನಿ, ಪಚ್ಚೆಸಾಬ, ಮಲಕಾಜಪ್ಪ ಜೀವೂರ ಮುಂತಾದ ಹೋರಾಟಗಾರರು ಸರಕಾರ ಕೂಡವ ಸೌಲಭ್ಯ ಹಾಗೂ ಪಿಂಚಣಿಯಿಂದ ವಂಚಿತರಾದರೆ, ಇನ್ನೂ ಕೆಲವರು ರಜಾಕಾರರ ದಾಳಿಯಿಂದ ಆಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾಗಿ ಬೇಸಾಯ ಹಾಗೂ ಕೂಲಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ.

**ಅಡ್ಡಿಟಿಪ್ಪಣಿ**

೧. ಗೋಪಾಲರಾವ್ ಹೇಜೀಬ್ (ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ**, ೨೦೦೧, ಪು.೩೦

೨. ಮಹಾಬಾಲೇಶ್ವರಪ್ಪ ಬಿ.ಸಿ.(ಲೇ), **ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು**, ೧೯೯೭, ಪು.೫೨

೩. ಪ್ರಭುಖಾನಾಪುರ(ಲೇ), **ಅಣ್ಣಾರಾವ್ ವೀರಭದ್ರಪ್ಪ ಪಾಟೀಲ ವ್ಯಕ್ತಿ ಚಿತ್ರ**, ತಳಮಳ ವಾರ ಪತ್ರಿಕೆ, ದಿ.೨೨.೨.೨೦೦೧, ಪು.೪

೪. ಕಲ್ಮಣಕರ್ ಡಿ.ಬಿ., **ಸಂದರ್ಶನ**, ದಿ.೨೯.೦೧.೨೦೦೨, ಕಲಬುರ್ಗಿ

೫. **ಸಂಯುಕ್ತ ಕರ್ನಾಟಕ** ದಿನಪತ್ರಿಕೆ ದಿ.೧೭.೦೯.೧೯೯೮

೬. ವಿದ್ಯಾಸಾಗರ ರಾಂಪುರೆ, ಸಂದರ್ಶನ, ದಿ.೦೮.೦೧.೨೦೦೨, ಕಲಬುರ್ಗಿ

೭. ವಿದ್ಯಾಧರ ಗುರೂಜಿ, **ಸಂದರ್ಶನ**, ದಿ.೨೦.೦೧.೨೦೦೨, ಕಲಬುರ್ಗಿ

೮. ಚನ್ನಬಸಪ್ಪ ಕುಳಗೇರಿ, **ಸಂದರ್ಶನ**, ದಿ.೧೧.೧.೨೦೦೨, ಯಾದಗೀರಿ

೯. ಶ್ರೀಪಾದರಾವ್ ಎಸ್.ಕುಲಕರ್ಣಿ, **ಸಂದರ್ಶನ**, ದಿ.೪.೧..೨೦೦೨, ಕಲಬುರ್ಗಿ

೧೦. ಗುರುಭೀಮರಾವ್ ಪಾಟೀಲ್, **ಸಂದರ್ಶನ**, ದಿ.೨೬.೧೦.೨೦೦೧, ಮಧುಗುಣಕಿ

೧೧. ಮಲಕಾಜಪ್ಪಾ ಜೀವೂರ, **ಸಂದರ್ಶನ**, ದಿ.೨೬.೧೦.೨೦೦೧, ಮಾದನಹಿಪ್ಪರಗಾ

೧೨. ಸರ್ದಾರ್ ಶರಣಗೌಡ ಪಾಟೀಲ, **ಸಂದರ್ಶನ**, ದಿ.೨೯.೧.೨೦೦೨, ಕಲಬುರ್ಗಿ

ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಜಿಲ್ಲೆಯು ಪ್ರಮುಖ ಪಾತ್ರವಹಿಸಿದೆ. ಏಕೆಂದರೆ ಹೈದರಾಬಾದ್ ಕರ್ನಾಟಕದ ಕೇಂದ್ರ ಬಿಂದು ಆಗಿದ್ದ ಕಲಬುರ್ಗಿಯು ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ, ಮೆರೆದ ಬಿಡಾಗಿದೆ. ಕಲಬುರ್ಗಿ ಜಿಲ್ಲೆಯು ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಗಡಿಭಾಗಗಳಿಗೆ ಹೊಂದಿಕೊಂಡಿದೆ. ಇದರಿಂದ ಮಹಾರಾಷ್ಟ್ರದ ಕೆಲ ಗಡಿಭಾಗಗಳು, ಕರ್ನಾಟಕದ ಬೀದರ್, ಕಲಬುರ್ಗಿ, ರಾಯಚೂರು ಜಿಲ್ಲೆಗಳು ಹಾಗೂ ಆಂಧ್ರದ ಕೆಲಪ್ರದೇಶಗಳನ್ನು ಹೈದರಾಬಾದ್ ನಿಜಾಂನ ಆಡಳಿತಕ್ಕೆ ಒಳಪಟ್ಟಿದ್ದವು. ಈ ಪ್ರದೇಶಗಳು ಪ್ರಾಂತೀಯ ರಾಜ್ಯಗಳು ರಚನೆಯಾಗಿರದೆ ಮೊದಲಿನ ವ್ಯಾಪ್ತಿ ಇದಾಗಿತ್ತು.

ಹೈದರಾಬಾದ್ ಕರ್ನಾಟಕ ಭಾಗದ ಗ್ರಾಮಗಳಲ್ಲದೆ ಮಹಾರಾಷ್ಟ್ರದ ಧುದನಿ, ವಾಗ್ದರಿಗಿ ಹಾಗೂ ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕು ನಿಜಾಂನ ಸಂಸ್ಥಾನಕ್ಕೆ ಒಳಪಟ್ಟಿರುವುದರಿಂದ ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟದ ವ್ಯಾಪ್ತಿಯಲ್ಲಿಯೇ ಚರ್ಚಿಸಿಕೊಂಡು ಹೋಗಿದ್ದೇನೆ. ಬಹು ಭಾಷಾ ಸಂಸ್ಕೃತಿಯ ನೆಲೆ ಬೀಡಾದಂತಹ ಕಲಬುರ್ಗಿ ಜಿಲ್ಲೆಯಲ್ಲಿ ಮಹಾರಾಷ್ಟ್ರದ ಗಡಿಸೀಮೆಯಲ್ಲಿ ರಜಾಕಾರರು ನಡೆಸಿದ ದೌರ್ಜನ್ಯ ಮೌಖಿಕ ಪರಂಪರೆಯ ಚರಿತ್ರೆಯಾದ ಲಾವಣಿ, ಬುಲಾಯಿ ಹಾಡು ಗೀಗೀ ಪದಗಳು ಮತ್ತು ಹೈದರಾಬಾದ್ ಕರ್ನಾಟಕ ವಿಮೋಚನೆಯಲ್ಲಿ ಹೋರಾಡಿದಂತಹ

ವಿಮೋಚನಾ ಹೋರಾಟಗಾರರು ರಜಾಕಾರರ ವಿರುದ್ಧ ಘೋಷಣೆಗಳು ಜನರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದುಕೊಂಡಿವೆ.

ರಜಾಕಾರರು ಹಿಂದೂಗಳ ಮೇಲೆ ನಡೆಸಿದ ದೌರ್ಜನ್ಯದ ಸ್ಥಳಗಳು ಇಂದಿಗೂ ಐತಿಹಾಸಿಕ ನೆನಪುಗಳು ಉಳಿದುಕೊಂಡಿವೆ. ಅಲ್ಲದೆ ದೇಶ ಸ್ವಾತಂತ್ರ್ಯಗೊಂಡಿದ್ದರು ಹೈದರಾಬಾದ್ ಕರ್ನಾಟಕ ಜನತೆ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಬೇಕಾಗಿತ್ತು. ನಿಜಾಂನ ಪ್ರತ್ಯೇಕ ಮುಸ್ಲಿಂ ರಾಷ್ಟ್ರ ಮಾಡುವ ಕನಸಿನಲ್ಲಿದ್ದನ್ನು ನಿಜಾಂನ ಅನುಯಾಯಿಗಳು ಈ ಭಾಗದ ಜನತೆಗೆ ನೆಮ್ಮದಿಯಿಂದ ಇರಲು ಬಿಡಲಿಲ್ಲ. ಈ ಪರಿಸ್ಥಿತಿಯನ್ನು ಕಂಡ ಸ್ವಾಮಿರಮಾನಂದ ತೀರ್ಥರು ನಿಜಾಂನ ವಿರುದ್ಧ ಹೋರಾಡಲು ಮೊದಲ ಹೆಜ್ಜೆ ಹಾಕಿದರು. ಇವರು ಹಾಕಿಕೊಟ್ಟ ಮಾರ್ಗದಲ್ಲಿ ಈ ಭಾಗದ ಸಾವಿರಾರು ದೇಶಪ್ರೇಮಿಗಳು ಹೈದರಾಬಾದ್ ಕರ್ನಾಟಕ ವಿಮೋಚನೆಗಾಗಿ ತಮ್ಮ ದೇಹವನ್ನೇ ಮುಡುಪಾಗಿಟ್ಟು ಕೊಂಡರು. ಅಂಥವರಲ್ಲಿ ದತ್ತಾತ್ರೇಯ ಸಂಗೋಳಿಗಿ, ಶಂಭಪವಾರ್ ಮುಂತಾದವರು ಹೆಸರು ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತವರೆಂದು ಹೆಸರಿಸದಿರುವುದು ವಿಷಾದನೀಯವೆನಿಸುತ್ತದೆ. ಇಡೀ ದೇಶ ಸ್ವಾತಂತ್ರ್ಯ ಪಡೆಯುವಲ್ಲಿ ಜನ ಯಾವ ರೀತಿ ಬ್ರಿಟಿಷ್‌ರ ವಿರುದ್ಧ ಹೋರಾಟ ಮಾಡಿದರೂ ಹಾಗೇ ಕಲಬುರ್ಗಿ ಜಿಲ್ಲೆಯ ಜನರು ಕೂಡ ಸ್ವಾತಂತ್ರ್ಯಕ್ಕಾಗಿ ಗರಿಬಿಚ್ಚಿ ಹಾಡಲು ನಿಜಾಂನ ವಿರುದ್ಧ ಸಿಡಿದೆದ್ದರು. ಸಾವಿರಾರು ಜನರ ಮೇಲೆ ಹಾಗೂ ಅನೇಕ ಗ್ರಾಮಗಳ ಮೇಲೆ ರಜಾಕಾರರು ಹಾವಳಿ ನಡೆಸಿ ಹತ್ಯಗೈದರೂ ಜನ ಹಿಂಜರಿಯಲಿಲ್ಲ. ಕೆಚ್ಚೆದೆಯಿಂದ ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಡಿದರು. ಅಂತಹ ಸಂದರ್ಭದಲ್ಲಿ ವಿಮೋಚನಾ ಹೋರಾಟಗಾರರು ಸೇರಿ ಹೈದರಾಬಾದ್ ವಿಮೋಚನಾ ಹೋರಾಟಕ್ಕಾಗಿ ಗಡಿಶಿಬಿರಗಳೆಂದು ವಿಶೇಷವಾಗಿ ಸೇನಾ ಗುಂಪುಗಳನ್ನು ನೇಮಿಸಿಕೊಂಡರು. ಈ ಭಾಗದ ನೊಂದ ಜನತೆಗೆ ಧೈರ್ಯ ಹೇಳುವ ಮೂಲಕ ರಜಾಕಾರರನ್ನು ಸದೆಬಡೆಯಲಾರಂಭಿಸಿದರು. ಈ ಗಡಿಶಿಬಿರಾರ್ಥಿಗಳಿಗೆ ಸಹಾಯವಾಗಿ ಸುದ್ದಿ ಮಾಧ್ಯಮಗಳಂತಹ ಪತ್ರಿಕೆಗಳು ಬೆಂಬಲವಾಗಿ ಬಹಳಷ್ಟು ಶ್ರಮಪಟ್ಟವು. ಶಿಬಿರಾಧಿಪತಿಗಳ ಮಾರ್ಗದರ್ಶನಗಳಲ್ಲಿ ರಜಾಕಾರರ ಮೇಲೆ ದಾಳಿ ಮಾಡುತ್ತಿದ್ದ ಶಿಬಿರಾರ್ಥಿಗಳು ಅವರ ಶಸ್ತ್ರಾಸ್ತ್ರ ಹಾಗೂ ಮದ್ದುಗುಂಡುಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ರಜಾಕಾರರ ಹಾವಳಿಯಿಂದ ಅನೇಕ ಗ್ರಾಮಗಳನ್ನು ಮುಕ್ತಿಗೊಳಿಸಿದರು. ಹಾಗಾಗಿ ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳ ಮೇಲೆ ಇಂದಿನವರೆಗೂ ಅಧ್ಯಯನ ನಡೆದಿಲ್ಲದ ಕಾರಣ ನನ್ನ ಎಂ.ಫಿಲ್. ಅಧ್ಯಯನಕ್ಕೆ ಇದೇ ಸೂಕ್ತವೆಂದು ಆಯ್ಕೆಮಾಡಿಕೊಂಡಿದ್ದೇನೆ. ನನ್ನ ಅಧ್ಯಯನದ ಅನುಕ್ರಮ ಈ ಕೆಳಗೆ ವಿವರಿಸಿದ್ದೇನೆ.

ಮೊದಲನೇ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಕುರಿತದ್ದಾಗಿದೆ. ಎರಡನೆಯ ಅಧ್ಯಾಯದಲ್ಲಿ ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟಕ್ಕೆ ಸ್ವಾತಂತ್ರ್ಯ ಹೋರಾಟಗಾರರ ಪ್ರೇರಣೆ ಹಾಗೂ ಅವರ ಮಾರ್ಗಗಳನ್ನು ಅನುಸರಿಸಿ ನಿಜಾಂನ ವಿರುದ್ಧ ಹೋರಾಡಲು ಹೈದರಾಬಾದ್ ಪ್ರಾಂತ್ಯದ ಜನತೆ ಮುಂದಾದರು. ಅನೇಕ ರಾಷ್ಟ್ರೀಯ ಹೋರಾಟಗಾರರು ಸೇರಿ ಹೈದರಾಬಾದ್ ಪ್ರಾಂತ್ಯದ ಭಾಗಗಳಲ್ಲಿ ಸಂಚರಿಸಿ ಜನತೆಗೆ ರಾಷ್ಟ್ರಭಕ್ತಿಯನ್ನು ಹೆಚ್ಚಿಸಲು ಶ್ರಮಿಸಿದರು. ಇವರ ಪ್ರೇರಣೆಯಿಂದ ಹೈದರಾಬಾದ್ ಸ್ವಾತಂತ್ರ್ಯ ಹೋರಾಟಗಾರರು ಹೈದರಾಬಾದ್ ರಾಜ್ಯ ಕಾಂಗ್ರೆಸ್‌ನ್ನು ೧೯೩೮ರಲ್ಲಿ ಸ್ಥಾಪಿಸಿದರು. ಇದರ ಮುಖಂಡತ್ವವನ್ನು ಸ್ವಾಮಿರಮಾನಂದ ತೀರ್ಥರು ವಹಿಸಿಕೊಂಡು ನಿಜಾಂನ ವಿರುದ್ಧ ಹೋರಾಡಲು ಮುಂದಾದರು. ಕಲಬುರ್ಗಿಯ ಶ್ರೀ ಮಂಠಾಳೆಯವರು ೧೯೩೨ರಲ್ಲಿ ಪ್ರಥಮ ಬಾರಿಗೆ ಖಾದಿ ಭಂಡಾರವನ್ನು ಪ್ರಾರಂಭಿಸಿದರು. ಹೀಗೆ ನಿಜಾಂನ ವಿರುದ್ಧ ಚಳುವಳಿಗಳನ್ನು ಕೈಗೊಂಡು ಅನೇಕ ಕಾಂಗ್ರೆಸ್ ಕಾರ್ಯಕರ್ತರು ಸೆರೆಮನೆ ವಾಸವನ್ನು ಅನುಭವಿಸಿದರು. ಸ್ವಾತಂತ್ರ್ಯ ಹೋರಾಟಗಾರರ ಪ್ರೇರಣೆ ಹಾಗೂ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಮುಖಂಡರ ಧೈರ್ಯ ಸಾಹಸ ಕಂಡು ವಿಮೋಚನಾ ಹೋರಾಟಗಾರರು ಆರ್ಯ ಸಮಾಜವನ್ನು ಸ್ಥಾಪಿಸಿದರು. ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರ ಮಹತ್ವದ್ದಾಗಿದೆ. ನಿಜಾಂನ ಮತಾಂಧತೆಯ ನೀತಿಯನ್ನು ವಿರೋಧಿಸಿ ಅನೇಕ ಕಾರ್ಯಕರ್ತರು ಹುತಾತ್ಮರಾದರು. ಕಲಬುರ್ಗಿಯ ಆರ್ಯ ಸಮಾಜ ಕಾರ್ಯಕರ್ತರಾದ ವಿಷ್ಣುಭಗವನಜೀ ಅವರು ನಿಜಾಂನ ವಿರುದ್ಧ 'ಭಾರತವು ಭಾರತೀಯರಿಗೆ' ಎಂಬ ಘೋಷಣೆ ಕೂಗಿ ನಿಜಾಂ ಪೊಲೀಸರ ಗುಂಡಿಗೆ ಬಲಿಯಾದರು. ಹೀಗೆ ನಿಜಾಂನು ತನ್ನ ಮುಸ್ಲಿಂ ಜನಾಂಗದ ಏಳಿಗೆಗಾಗಿ ಅನೇಕ ಕ್ರೂರ ನೀತಿಗಳನ್ನು ಅನುಸರಿಸ ತೊಡಗಿದನು. ಹೈದರಾಬಾದ್ ಪ್ರಾಂತ್ಯವನ್ನು ಮುಸ್ಲಿಂ ರಾಷ್ಟ್ರವನ್ನಾಗಿ ಪರಿಗಣಿಸಬೇಕೆಂಬ ಕನಸು ಕಂಡ ನಿಜಾಂ ಮೀರ್ ಉಸ್ಮಾ ಅಲೀಖಾನ್ ಹೈದರಾಬಾದ್ ಪ್ರಾಂತ್ಯದ ಜನತೆಗೆ ಅನೇಕ ದಬ್ಬಾಳಿಕೆಯನ್ನು ಹಾಕಿದನು. ನಿಜಾಂನ ಆಡಳಿತದಲ್ಲಿ ಉರ್ದು ಭಾಷೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟು ದೇಶೀಯ ಭಾಷೆಗಳನ್ನು ತಿರಸ್ಕರಿಸಿದನು. ಪ್ರತಿ ಶಾಲಾ ಕಾಲೇಜುಗಳಲ್ಲಿ ಉರ್ದುವನ್ನೇ ಬೋಧಿಸಲು ಆಜ್ಞೆ ಹೊರಡಿಸಿದನು. ಉರ್ದು ಭಾಷೆಯನ್ನು ರಾಜ್ಯ ಭಾಷೆ ಎಂದು ಘೋಷಿಸಿದನು. ಇದನ್ನು ಸಹಿಸಲಾರದ ಜನತೆ ನಿಜಾಂನ ಭಾಷೆ ದಬ್ಬಾಳಿಕೆಯನ್ನು ವಿರೋಧಿಸಿದರು. ಅನೇಕ ವಿಮೋಚನಾ ಹೋರಾಟಗಾರರು ಕನ್ನಡ ಶಾಲೆಗಳನ್ನು ಸ್ಥಾಪಿಸಿದರು. ಕಲಬುರ್ಗಿಯ ದೇವುಳಗಾಂವಕರ್ ಅವರು ಕ್ರಿ.ಶ.೧೯೦೭ರಲ್ಲಿ 'ನೂತನ ವಿದ್ಯಾಲಯ' ಹಾಗೂ ಸಾರ್ವಜನಿಕ ಗ್ರಂಥಾಲಯವನ್ನು ಆರಂಭಿಸಿದರೆ ಶರಣಬಸವೇಶ್ವರ ಸಂಸ್ಥಾನದ ಆಶ್ರಯದಲ್ಲಿ 'ಶರಣಬಸವೇಶ್ವರ ವಾಚನಾಲಯ'ವನ್ನು ಪ್ರಾರಂಭಿಸಿದರು. ಹೀಗೆ ಕಲಬುರ್ಗಿ

ಜಿಲ್ಲೆಯ ಅನೇಕ ಭಾಗಗಳಲ್ಲಿ ಕನ್ನಡ ಹಾಗೂ ಸಂಸ್ಕೃತ ಭಾಷೆಯ ಶಾಲೆಗಳನ್ನು ಸ್ಥಾಪಿಸಿದರು. ವಿಮೋಚನಾ ಹೋರಾಟಗಾರರು ಶಾಲೆಯ ಮುಂದೆ ಉರ್ದು ನಾಮಫಲಕ ಹಾಕಿ ಒಳಗಡೆ ಕನ್ನಡವನ್ನು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಅನೇಕ ಶಿಕ್ಷಕರು ವಿದ್ಯಾರ್ಥಿಗಳಿಗೆ ರಾಷ್ಟ್ರಭಕ್ತಿಯನ್ನು ಹೆಚ್ಚಿಸಿ ಅವರಲ್ಲಿ ಧೈರ್ಯ, ಸಾಹಸ, ತ್ಯಾಗ ಹಾಗೂ ಬಲಿದಾನಗಳ ಬಗ್ಗೆ ಪಾಠ ಹೇಳಿ ವಿಮೋಚನಾ ಹೋರಾಟದಲ್ಲಿ ಧುಮಕಲು ಪ್ರೇರೆಪಿಸಿದರು. ವಂದೇ ಮಾತರಂ ಎಂಬ ಸ್ವಾತಂತ್ರ್ಯ ಹೋರಾಟಗಾರರ ಮಂತ್ರವನ್ನು ಹೈದರಾಬಾದ್ ಪ್ರಾಂತ್ಯದೆಲ್ಲೆಡೆ ಹರಡಿತು. ಹೈದರಾಬಾದ್ ನಿಜಾಂನು ವಂದೇ ಮಾತರಂ ಚಳುವಳಿಗಾರರನ್ನು ಹಿಡಿದು ಸೆರೆಮನೆಗೆ ಹಾಕಿಸಿದನು. ವಂದೇ ಮಾತರಂ ಗೀತೆಯ ಮೇಲೆ ನಿರ್ಬಂಧನೆಯನ್ನು ಹಾಕಿದನು. ಆದರೂ ವಿಮೋಚನಾ ಹೋರಾಟಗಾರರು ಹೋರಾಟ ನಿಲ್ಲಿಸದೇ ಮುಂದುವರಿಸಿದರು. ಈ ಹೋರಾಟಗಾರರನ್ನು ತಡೆಯಲು ಹೈದರಾಬಾದ್ ನಿಜಾಂನು ತನ್ನ ಅನುಯಾಯಿಯಾದ ಕಾಸಿಂ ರಜ್ವಿಯ ನೇತೃತ್ವದಲ್ಲಿ 'ರಜಾಕಾರ' ಎಂಬ 'ಮುಸ್ಲಿಂ ಸ್ವಯಂ ಸೇವಕರನ್ನು' ಹುರಿದುಂಬಿಸಿ ಈ ಭಾಗಗಳಲ್ಲೆಲ್ಲ ಕೊಲೆ, ಸುಲಿಗೆ, ದರೋಡೆ ಹಾಗೂ ಅತ್ಯಾಚಾರಗಳನ್ನು ನಡೆಸಿದನು. ರಜಾಕಾರರ ಹಾವಳಿಗೆ ಅನೇಕ ಗ್ರಾಮಗಳು ತುತ್ತಾದವು. ಇವರ ಅತ್ಯಾಚಾರಗಳನ್ನು ತಡೆಯಲು ವಿಮೋಚನಾ ಹೋರಾಟಗಾರರು ಗಡಿಶಿಬಿರಗಳನ್ನು ಸ್ಥಾಪಿಸಿದರು. ಗಡಿಶಿಬಿರಗಳ ಸಹಾಯದಿಂದ ಭಾರತೀಯ ಸೈನ್ಯಕರು ರಜಾಕಾರರ ಕ್ಯಾಂಪುಗಳನ್ನು ನಾಶಮಾಡಿದರು. ನಿಜಾಂ ಪೊಲೀಸರು ಸೋಲುವ ಪರಿಸ್ಥಿತಿ ಕಂಡು ಹೈದರಾಬಾದ್ ಪ್ರಾಂತ್ಯದ ಪ್ರಧಾನ ಮಂತ್ರಿ ಲಾಯಖಾನ್ ಅಲಿ ಹಾಗೂ ನವಾಬ್ ಮೀರ್ ಉಸ್ಮಾನ್ ಅಲಿಖಾನರು ಭಾರತ ಒಕ್ಕೂಟ ಪತ್ರಕ್ಕೆ ಸಹಿ ಹಾಕಿದರು. ಭಾರತ ಸ್ವಾತಂತ್ರ್ಯದಲ್ಲಿ ಹೈದರಾಬಾದ್ ಕರ್ನಾಟಕವು ಸೇರ್ಪಡೆಯಾಯಿತು.

ಮೂರನೇ ಅಧ್ಯಾಯದಲ್ಲಿ ಕಲಬುರ್ಗಿ ಜಿಲ್ಲೆಯ ಗಡಿ ಶಿಬಿರಗಳು ಕುರಿತು ಅಧ್ಯಯನ ಮಾಡಲಾಗಿದೆ. ಹೈದರಾಬಾದ್ ಪ್ರಾಂತ್ಯದ ಭಾಗಗಳಲ್ಲಿ ರಜಾಕಾರರ ಹಾಗೂ ಪಠಾಣರ ದಬ್ಬಾಳಿಕೆ ಹೆಚ್ಚಾಗಿತ್ತು. ನಿಜಾಂನಿಂದ ಸಂಪೂರ್ಣ ಸ್ವಾತಂತ್ರ್ಯ ಪಡೆದು ರಜಾಕಾರರು ಹಿಂದೂ ಜನಗಣತೆಯ ಮೇಲೆ ಅತೀ ಕ್ರೂರವಾದ ಅತ್ಯಾಚಾರಗಳನ್ನು ಮಾಡಿದರು. ಹೈದರಾಬಾದ್ ಕರ್ನಾಟಕ ಜನತೆಯ ಪರಿಸ್ಥಿತಿ ಬಹಳಷ್ಟು ದುಃಖದಾಯಕವಾಗಿತ್ತು. ಎಲ್ಲಿ ನೋಡಿದರಲ್ಲಿ ಕೊಲೆ, ಸುಲಿಗೆ, ಮಹಿಳೆಯರ ಮಾನಬಂಗ, ಹೀಗೆ ರಕ್ತದ ಓಕಳಿಯನ್ನು ರಜಾಕಾರರು ಹರಿಸಿದರು. ಅನೇಕ ಗ್ರಾಮಗಳ ಜನತೆ ತಮ್ಮ ಮನೆ, ಆಸ್ತಿ, ಒಡವೆಗಳನ್ನು ಕಳೆದುಕೊಂಡು ಬೇರೆ ಕಡೆಗೆ ವಲೆಸ ಹೋದರು. ಇತಂಹ ದುರ್ಘಟನೆಗಳನ್ನು ಕಂಡು ವಿಮೋಚನಾ ಹೋರಾಟಗಾರರು ಹೈದರಾಬಾದ್ ಪ್ರಾಂತ್ಯದ ಗಡಿ ಭಾಗಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದರು. ಇದರಂತೆ ಕಲಬುರ್ಗಿ ಜಿಲ್ಲೆಯಲ್ಲೂ ಸಹ ಗಡಿ ಶಿಬಿರಗಳು

ಹುಟ್ಟಿಕೊಂಡವು. ಕಲಬುರ್ಗಿ ಜಿಲ್ಲೆಯ ಗಡಿಶಿಬಿರಗಳಾದ ಧುದನಿ, ಗೌಡಗಾಂವ್, ಕೇಸರಜವಳಗಾ, ಸಿಂದಗಿ, ವಾಗ್ದರಗಿ ಎಂಬ ಗಡಿ ಭಾಗಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿದರು. ಈ ಗಡಿ ಶಿಬಿರಗಳ ಮುಖ್ಯ ಕಛೇರಿಯು ಈಗಿನ ಗದಗ ಜಿಲ್ಲೆಯಾಗಿತ್ತು. ಶಿಬಿರಗಳ ಮೇಲ್ವಿಚಾರಕರಾಗಿ ಕೊಲ್ಲೂರು ಮಲ್ಲಪ್ಪ ಹಾಗೂ ಜನಾರ್ಧನ ದೇಸಾಯಿ ವಹಿಸಿಕೊಂಡರು. ಪ್ರತಿಯೊಂದು ಗಡಿಶಿಬಿರಗಳಿಗೆ ಶಿಬಿರಾಧಿಪತಿ, ಕಾರ್ಯದರ್ಶಿ, ಗುಪ್ತದಳ ಎಂದು ವಿಂಗಡಿಸಿ ಕಾರ್ಯನಿರ್ವಹಿಸುತ್ತಿದ್ದರು. ಈ ಶಿಬಿರಗಳ ಕಾರ್ಯ ರಜಾಕಾರರನ್ನು ಹತ್ತಿಕ್ಕುವುದು ನೊಂದ ಜನತೆಗೆ ಆಶ್ರಯ ಕೊಡುವುದು ಹಾಗೂ ಹೈದರಾಬಾದ್ ಪ್ರಾಂತ್ಯವನ್ನು ಭಾರತ ಒಕ್ಕೂಟಕ್ಕೆ ಸೇರಿಸುವುದು ಶಿಬಿರಗಳ ಮುಖ್ಯ ಉದ್ದೇಶವಾಗಿತ್ತು. ಶಿಬಿರಗಳಲ್ಲಿ ಶಿಬಿರಾರ್ಥಿಗಳಿಗೆ ಶಸ್ತ್ರಾಸ್ತ್ರ ತರಬೇತಿ ಕೊಡುವುದು ಕೈಬಾಂಬು, ಖಡ್ಗ, ಬಂದೂಕು, ಬರ್ಚಿಗಳನ್ನು ತಯಾರಿಸುವುದು ಇವರ ಕಾರ್ಯವಾಗಿತ್ತು. ಹಾಗೂ ರಜಾಕಾರರ ಮೇಲೆ ದಾಳಿ ಮಾಡಿ ಅವರಿಂದ ಜನತೆಯನ್ನು ರಕ್ಷಿಸುತ್ತಿದ್ದರು. ಅನೇಕ ಶಿಬಿರಾರ್ಥಿಗಳು ತಮ್ಮ ಜೀವದ ಹಂಗು ತೊರೆದು ರಜಾಕಾರರೊಡನೆ ಹೋರಾಡಿ ತಮ್ಮ ಪ್ರಾಣವನ್ನು ಕಳೆದುಕೊಂಡಿದ್ದಾರೆ. ಕಲಬುರ್ಗಿ ಜಿಲ್ಲೆಯ ಗಡಿ ಶಿಬಿರಗಳ ಮುಖಂಡತ್ವವನ್ನು ವಹಿಸಿದ ಶರಣಗೌಡ ಪಾಟೀಲ ಇನಾಂದಾರ್, ಅಣ್ಣರಾವ್ ವೀರಭದ್ರಪ್ಪ ಪಾಟೀಲ, ಗುರುಭೀಮಾರಾವ್ ಪಾಟೀಲ, ಡಿ.ಬಿ.ಕಲ್ಮಣಕರ್, ಭೈರಪ್ಪ ಪಾಟೀಲ ಭೂಸನೂರ ಅವರು ರಜಾಕಾರರ ವಿರುದ್ಧ ಹೋರಾಡಿದರು. ರಜಾಕಾರರ ವಿರುದ್ಧ ಹೋರಾಡಿದ ಚಂದಪ್ಪ ಮೋನಳ್ಳಿ, ಅಂಬೇ ಸುದರ್ಶನ, ಮಾಧುಚಂದಲ್ ಮುಂತಾದ ಶಿಬಿರಾರ್ಥಿಗಳು ತಮ್ಮ ಪ್ರಾಣವನ್ನು ಕಳೆದುಕೊಂಡರು. ಕೊನೆಗೆ ಭಾರತ ಸೈನ್ಯ ಕಾರ್ಯಾಚರಣೆಯವರ ಜೊತೆ ಸೇರಿ ರಜಾಕಾರರ ತಾಣವನ್ನು ನಾಶಮಾಡಿದರು. ಹೀಗೆ ಅನೇಕ ಧೈರ್ಯ, ಸಾಹಸದಿಂದ ಅವರು ವಿರುದ್ಧ ಹೋರಾಡಿ ಕೊನೆಗೆ ಜಯಶೀಲರಾದರು. ಹದಿಮೂರು ತಿಂಗಳ ಕಾಲ ಸತತ ಪ್ರಯತ್ನದಿಂದ ೧೭ನೇ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ್ ಪ್ರಾಂತ್ಯ ಭಾರತ ಒಕ್ಕೂಟಕ್ಕೆ ಸೇರಿತು. ಗಡಿ ಶಿಬಿರಾರ್ಥಿಗಳು ಕಂಡ ಕನಸು ನನಸಾಯಿತು.

ಹೈದರಾಬಾದ್ ವಿಮೋಚನಾ ಆಂದೋಲನದಲ್ಲಿ ಮಾಧ್ಯಮಗಳ ಪಾತ್ರ ಮಹತ್ವದ್ದಾಗಿದೆ. ವಿಮೋಚನಾ ಹೋರಾಟಗಾರರಿಗೆ ಸ್ಫೂರ್ತಿ ಹಾಗೂ ರಾಷ್ಟ್ರೀಯತೆ ಪ್ರಜ್ಞೆ ಮೂಡಿಸಲು ಶ್ರಮಿಸಿದ ಪತ್ರಿಕೆಗಳು, ಲೇಖನಗಳು, ಲಾವಣಿಕಾರರು, ಕೀರ್ತನೆಕಾರರು, ಬುಲಾಯಿ ಹಾಡುಗಾರರು ಕುರಿತಾಗಿ ಅಧ್ಯಾಯ ನಾಲ್ಕರಲ್ಲಿ ವಿವರಿಸಲಾಗಿದೆ. ವಿಮೋಚನಾ ಹೋರಾಟದಲ್ಲಿ 'ದಿ ಡಿಮಾಕ್ರಾಟ್', 'ಇಮರೋಜ್ ಉರ್ದು ಪತ್ರಿಕೆ' ಹಾಗೂ 'ಸಂಯುಕ್ತ ಕರ್ನಾಟಕ' ಪತ್ರಿಕೆಗಳ ಪಾತ್ರ ಚಿರಸ್ಮರಣೀಯಾದದು. ಈ ಪತ್ರಿಕೆಗಳು ನಿಜಾಂನ ಕ್ರೂರ ನೀತಿ ಹಾಗೂ ಕಪಟ ನಾಟಕಗಳನ್ನು ಮುಖಪುಟಗಳಲ್ಲಿ

ಮುದ್ರಿಸಿ ಹೈದರಾಬಾದ್ ಪ್ರಾಂತ್ಯದ ಜನತೆಗೆ ಮುಟ್ಟಿಸುತ್ತಿದ್ದವು. ಅನೇಕ ಭಾಗಗಳಲ್ಲಿ ನಡೆದ ರಜಾಕಾರರ ಅತ್ಯಾಚಾರಗಳನ್ನು ಬಯಲಿಗೆಳೆದು ಜನರಲ್ಲಿ ನಿಜಾಂನ ವಿರುದ್ಧ ಹೋರಾಡಲು ಧೈರ್ಯ ತುಂಬಿದವು. 'ದಿ ಡಿಮಾಕ್ರಾಟ್' ಪತ್ರಿಕೆಯು ತನ್ನ ಪತ್ರಿಕೆಯ ಮುಖಪುಟದಲ್ಲಿ ಗಾಂಧೀಜಿಯವರ ಹಾಗೂ ತ್ರಿವರ್ಣ ಧ್ವಜಗಳ ಚಿತ್ರವನ್ನು ಮುದ್ರಿಸಿ ಹೈದರಾಬಾದ್ ಪ್ರಾಂತ್ಯದಲ್ಲೆಲ್ಲ ಕಳುಹಿಸಿಕೊಡುತ್ತಿದ್ದರು. 'ಇಮರೋಜ್' ಪತ್ರಿಕೆಯ ಸಂಪಾದಕ 'ಶೋಹಬುಲ್‌ಖಾನ್' ಮುಸ್ಲಿಂನಾದರು ನಿಜಾಂನ ನೀತಿಗಳನ್ನು ವಿರೋಧಿಸುತ್ತಿದ್ದನು ಇದರ ಪ್ರಯುಕ್ತ ಖಾಸಿಂ ರಜ್ವಿಯು ಶೋಹಬುಲ್‌ಖಾನನು ಕೊಲೆಮಾಡಿಸಿದನು. ವಿಮೋಚನಾ ಹೋರಾಟಕ್ಕೆ ಪತ್ರಿಕೆಗಳ ಪಾತ್ರ ಎಷ್ಟು ಮುಖ್ಯವೂ ಅಷ್ಟೇ ಲಾವಣಿಗಳು, ಕೀರ್ತನೆಗಳು, ಬುಲಾಯಿ ಹಾಡುಗಳು ಕಾರ್ಯನಿರ್ವಹಿಸಿವೆ. ಹಾಡುಗಳ ಸಾಲಿನಲ್ಲಿ ರಜಾಕಾರರ ದೌರ್ಜನ್ಯ ಕುರಿತು ವಿಶ್ಲೇಷಿಸಿ ಜನರಿಗೆ ತಲುಪಿಸುತ್ತಿದ್ದರು. ಮಂದಿರಗಳಲ್ಲಿ ಕೀರ್ತನೆಗಳ ಮುಖಾಂತರ ಜಯರಾಮಾಚಾರ್ಯರು ನಿಜಾಂನ ದ್ವಂದ್ವ ನೀತಿಗಳನ್ನು ಹೇಳುತ್ತಿದ್ದರು. ಹಾಗೂ ನಲ್ವಡಿ ಶ್ರೀಕಂಠಶಾಸ್ತ್ರಿಯವರು ಲಾವಣಿಗಳಲ್ಲಿ ಪಠಾಣರ ಹಾಗೂ ರಜಾಕಾರರ ಹಾವಳಿಗೆ ಬಲಿಯಾದ ಜನತೆಯ ಕಣ್ಣೀರು ಕಥೆಯನ್ನು ಹಾಡುಗಳ ಮುಖಾಂತರ ಚಿತ್ರಿಸುತ್ತಿದ್ದರು.

ಐದನೇಯ ಅಧ್ಯಾಯದಲ್ಲಿ ಕಲಬುರ್ಗಿ ಜಿಲ್ಲೆಯ ವಿಮೋಚನಾ ಹೋರಾಟಗಾರರನ್ನು ಪರಿಚಯಿಸುತ್ತಾ ಅವರ ಧೈರ್ಯ, ಸಾಹಸಗಳನ್ನು ನಾವು ಕಂಡುಕೊಳ್ಳುತ್ತೇವೆ. ಕಲಬುರ್ಗಿ ಜಿಲ್ಲೆಯ ಸುಮಾರು ೯೦೦ಕ್ಕೂ ಹೆಚ್ಚು ವಿಮೋಚನಾ ಹೋರಾಟಗಾರರಿದ್ದಾರೆ. ಇವರಲ್ಲಿ ಕೆಲವರು ಜೀವಂತವಾಗಿದ್ದು ಅಂದಿನ ಸ್ಥಿತಿಗತಿ ನಿಜಾಂನ ಆಡಳಿತ ವ್ಯವಸ್ಥೆ ರಜಾಕಾರರ ಕೆಟ್ಟವರ್ತನೆಗಳನ್ನು ಕಣ್ಣಾರೆ ಕಂಡು ಹಾಗೂ ಅನುಭವಿಸಿದ ಕಥೆಯನ್ನು ಹೇಳುತ್ತಾರೆ. ಪ್ರಸ್ತುತ ಕಲಬುರ್ಗಿ ಜಿಲ್ಲೆಯಲ್ಲಿ ಇದ್ದು ತಮ್ಮ ನಿವೃತ್ತಿ ಜೀವನವನ್ನು ಕಳೆಯುತ್ತಿದ್ದ ಡಿ.ಬಿ.ಕಲ್ಮಣಕರ್, ಸರ್ದಾರ್ ಶರಣಗೌಡಪಾಟೀಲ, ಶ್ರೀಪಾದರಾವ್ ಕುಲಕರ್ಣಿ, ಚನ್ನಬಸಪ್ಪ ಕುಳಗೇರಿ, ವಿದ್ಯಾದರ ಗುರೂಜಿ ಹಾಗೂ ಮಲಕಾಜಪ್ಪ ಜೀವೂರ ಅವರು ತಮ್ಮ ಹೋರಾಟದ ಅನುಭವವನ್ನು ನಮ್ಮ ಜೊತೆ ಹಂಚಿಕೊಂಡರು. ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಅನೇಕ ವೀರ ಹೋರಾಟಗಾರರು ನಿಜಾಂನ ವಿರುದ್ಧ ಹೋರಾಡಿ ತಮ್ಮ ಪ್ರಾಣವನ್ನು ದೇಶಕ್ಕಾಗಿ ದಾರೆಯೆರೆದರು. ಅನೇಕ ವಿಮೋಚನಾ ಹೋರಾಟಗಾರರು ಗಡಿಶಿಬಿರಗಳಲ್ಲಿ ಪಾಲ್ಗೊಂಡು ಜನತೆಗೆ ರಕ್ಷಣೆ ಒದಗಿಸಿದರು.

ಕರ್ನಾಟಕದಲ್ಲಿ ಹೈದರಾಬಾದ್ ಕರ್ನಾಟಕವೆಂಬ ಮೂರು ಜಿಲ್ಲೆಗಳಾದ ಕಲಬುರ್ಗಿ, ಬೀದರ್, ರಾಯಚೂರು ಜಿಲ್ಲೆಗಳು ಆರ್ಥಿಕ ಮತ್ತು ಶೈಕ್ಷಣಿಕವಾಗಿ ಇಂದಿಗೂ ಹಿಂದುಳಿದ ಪ್ರದೇಶವಾಗಿದೆ. ಏಕೆಂದರೆ ದಕ್ಷಿಣ ಕರ್ನಾಟಕಕ್ಕೆ ಹೋಲಿಸಿದರೆ ಶೈಕ್ಷಣಿಕ ಸವಲತ್ತು ಹೈದರಾಬಾದ್ ಕರ್ನಾಟಕ ಭಾಗದ

ಜನತೆಗೆ ಸಿಕ್ಕಿದ್ದು ವಿರಳ. ರಾಜ್ಯ ಪ್ರಭುತ್ವದಲ್ಲಿ ಬದುಕವ ಜನರು ರಾಜನು ವಿಧಿಸಿದ ಕಟ್ಟಳೆ ನಿಯಮಗಳಿಗೆ ಬದ್ಧರಾಗಿಯೇ ನಡೆಯಬೇಕಾಗುತ್ತದೆ. ಹೀಗಾಗಿ ಸ್ವಾತಂತ್ರ್ಯ ಪೂರ್ವದ ವ್ಯವಹಾರಿಕ ಭಾಷೆ ಉರ್ದುವಾಗಿ, ಮನೆ ಭಾಷೆ ಕನ್ನಡವಾಗಿತ್ತು. ಕನ್ನಡಿಗರಿಗೆ ಶಿಕ್ಷಣ ವ್ಯವಸ್ಥೆ ಇರಲಿಲ್ಲ. ಇದ್ದರು ಕೂಡ ಮುಸ್ಲಿಂ ಜನಾಂಗದ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಾಧನ್ಯತೆ ಇತ್ತು. ಮಠಮಾನ್ಯಗಳಲ್ಲಿ ಗಾವಠಿ ಶಾಲೆಯ ಮೂಲಕ ಕನ್ನಡವನ್ನು ಕಲಿತವರು ಇಂದಿಗೂ ಆಗಿನ ಕನ್ನಡ ಕಲಿಯುವವರ ಮೇಲಿನ ದಬ್ಬಾಳಿಕೆ ಹಾಗೂ ಶಿಕ್ಷಣ ಕೊಡುವ ಕ್ರೂರ ನೀತಿಯನ್ನು ನೆನಪಿಸಿಕೊಂಡಿರುವುದು ಈ ಅಧ್ಯಾಯದಿಂದ ಕಂಡುಬರುತ್ತದೆ. ನಿಜಾಂನಿಂದ ಬಳಲಿದ ಈ ಭಾಗ ಅಪ್ಪಟ್ಟ ಕನ್ನಡವಾಗಲು ಶತಮಾನಗಳೇ ಗತಿಸಿದವು. ಹೀಗಾಗಿ ದೇಶ ಸ್ವಾತಂತ್ರ್ಯ ಪಡೆದರು ಕಲಬುರ್ಗಿ ಜಿಲ್ಲೆ ೧೩ತಿಂಗಳು ಸ್ವಾತಂತ್ರ್ಯಕ್ಕಾಗಿ ಪಟ್ಟ ಶ್ರಮವನ್ನು ನಿಜಾಂನ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲು ಮಾಡಿದ ಹೋರಾಟವನ್ನು ಈ ಅಧ್ಯಯನದಲ್ಲಿ ಹಿಡಿದಿಡಲು ಪ್ರಯತ್ನಪಟ್ಟಿದ್ದೇನೆ.

# ೧. ಗ್ರಂಥ ಋಣ


೦೧. ಅನಂತ ಭಾಲೇರಾವ್(ಲೇ), **ಹೈದರಾಬಾದ್ ಸ್ವಾತಂತ್ರ್ಯ ಸಂಗ್ರಾಮ ಆಣಿ ಮರಾಟವಾಡ್**

೦೨. ಅಮರೇಶ ನುಗಡೋಣಿ(ಲೇ), ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳುವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೦೩. ಗೋಪಲಾರಾವ್ ಹೇಜೀಬ್(ಲೇ), **ಹೈದರಾಬಾದ್ ಮುಕ್ತಿ ಸಂಘರ್ಷ**, ರಾಷ್ಟ್ರೋತ್ಥಾನ ಸಾಹಿತ್ಯ, ಕೇಶವ ಶಿಲ್ಪ, ಬೆಂಗಳೂರು, ೨೦೦೧.

೦೪. ಚಂದ್ರಶೇಖರ ಎಸ್.(ಸಂ), **ಕರ್ನಾಟಕ ಚರಿತ್ರೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೦೫. ಚಿಕ್ಕಣ್ಣ ಕಾ.ತ., ಮತ್ತು ಮುದ್ದುಕೃಷ್ಣ ವೈ.ಕೆ.(ಸಂ), **ಸ್ವರ್ಣಸಂಚಯ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೮.

೦೬. ಚುರ್ಚಿಹಾಳಮಠ, ಸಿ.ಎಂ.(ಸಂ), **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನಾ ಹೋರಾಟ**, ಮುಂಡರಗಿ ತಾಲೂಕು ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ, ೧೯೯೯.

೦೭. ದೇಸಾಯಿ ವಿ.ಎಚ್.(ಲೇ), **ವಂದೇ ಮಾತರಂದಿಂದ ಜನಗಣಮನದವರೆಗೆ**, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ.

೦೮. ನಲವಡಿ ಶ್ರೀಕಂಠಶಾಸ್ತ್ರೀ(ಲೇ), **ಹೈದರಾಬಾದ್ ರಜಾಕಾರ ಲಾವಣಿ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೦೯. ನಾಗರಾಜ್ ಮತ್ತು ಪಿ.ವಿ.ಕೃಷ್ಣಮೂರ್ತಿ(ಸಂ) ಇತಿಹಾಸ ದರ್ಶನ, ಸಂ.೧೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೯.

೧೦. ನಾಗರಾಜ ಕಾ.ಶ್ರೀ.(ಲೇ), ಹೈದರಾಬಾದ್ ಮುಕ್ತಿಗಾಥೆ, **ಸಾಹಿತ್ಯ ಸಿಂಧು**, ಪ್ರಕಾಶನ, ೧೯೯೮.

೧೧. ಪಾಟೀಲ ಎಚ್.ಎಸ್.(ಸಂ), **'ವಿಮೋಚನೆ' ಕೊಪ್ಪಳ ಜಿಲ್ಲೆಯ ಹೈದರಾಬಾದ್ ವಿಮೋಚನಾ ಹೋರಾಟದ ಕಥೆ**, ಜಿಲ್ಲಾ ಆಡಳಿತ, ಕೊಪ್ಪಳ, ೧೯೯೯.

೧೨. ಪಾಟೀಲ ಎಂ.ಬಿ.(ಸಂ), **ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್** (ಪರಿಷ್ಕೃತ ಆವೃತ್ತಿ), ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ೧೯೯೭.

೧೩. ಬಸವರಾಜ ಪೊಲೀಸ್ ಪಾಟೀಲ(ಲೇ), **ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ**, ಅಮರ ಪ್ರಕಾಶನ, ಗುಲಬರ್ಗಾ, ೨೦೦೧.

೧೪. ಬಸವರಾಜ ಮಲಶೆಟ್ಟಿ(ಲೇ), ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೧೫. ಮಹಾಬಲೇಶ್ವರಪ್ಪ ಬಿ.ಸಿ.(ಲೇ), **ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು,** ಪ್ರಸಾರಾಂಗ, ಗುಲಬರ್ಗಾ, ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭.

೧೬. ಮಹಾಬಲೇಶ್ವರಪ್ಪ ಬಿ.ಸಿ.(ಲೇ), **ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೧೭. ರಾಮಣ್ಣ ಹವಳೆ(ಲೇ), **ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ,** ಚೇತನ ಪ್ರಕಾಶನ, ರಾಯಚೂರು, ೧೯೯೬.

೧೮. ಶಿವರುದ್ರಸ್ವಾಮಿ ಎಸ್.ಎನ್.(ಲೇ), **ಆಧುನಿಕ ಭಾರತದ ಇತಿಹಾಸ,** ಪೌರಸ್ತ್ಯ ಪ್ರಕಾಶನ, ಎಂ.ಆರ್.ಅಗ್ರೂ ಎದುರು ಶಾರದನಗರ, ತಿಪಟೂರು, ೨೦೦೧.

೧೯. ಸ್ವಾಮಿ ರಮಾನಂದ ತೀರ್ಥ(ಲೇ), **ಹೋರಾಟದ ನೆನಪುಗಳು,** ಸೂರ್ಯನಾಥ ಕಾಮತ್(ಅನು), ಗೀತಾ ಬುಕ್ ಹೌಸ್, ಕೆ.ಆರ್.ವೃತ್ತ, ಮೈಸೂರು, ೧೯೭೭.

೨೦. ಸ್ವಾಮಿರಾವ್ ಕುಲಕರ್ಣಿ ಮತ್ತು ರವೀಂದ್ರ ಕರ್ಜಗಿ(ಸಂ), **ಜಗನ್ನಾಥರಾವ್ ಚಂಡ್ರಿಕಿ ಅಭಿನಂದನ ಗ್ರಂಥ,** ಜಗನ್ನಾಥರಾವ್ ಚಂಡ್ರಿಕಿಯವರ ಸನ್ಮಾನ ಸಮಿತಿ, ಗುಲಬರ್ಗಾ, ೧೯೯೭.

೨೧. ಸ್ವಾಮಿ ಆರ್.ಎಸ್. ಮತ್ತು ಎಸ್.ಎಂ.ಹಿಪ್ಪರಗಿ(ಸಂ), **ಭಾರತ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸ್ಮರಣ ಸಂಪುಟ, ಆಳಂದ ತಾಲೂಕಿನ ಸಂಪೂರ್ಣ ದರ್ಶನ,** ಭಾರತ ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಸಮಿತಿ, ಆಳಂದ, ೧೯೯೭.

೨೨. ಸೂರ್ಯನಾಥ್ ಕಾಮತ್(ಸಂ), **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂ.೩,** ಗೀತಾಬುಕ್ ಹೌಸ್, ಕೆ.ಆರ್.ವೃತ್ತ, ಮೈಸೂರು, ೧೯೭೭.

**ಇಂಗ್ಲಿಷ್ ಪುಸ್ತಕಗಳು**

೦೧. Devlgaonker, V.P., **Swami Ramananda Tirtha- An Epochmaker,** Gulbarga University, Gulbarga, 1985.

೦೨. Kate, P.V., **Marathawada under the Nizams Mittle Publication,** Delhi, 1987.

೦೩. Munshi, K.M., **The End of an Era,** by Bharateeya Vidyabhavan, Bombay, 1957.

೦೪. Tirth, Swami Ramananda, **Memories of Hyderabad Freedom Struggle,** Bombay State, 1967.

೦೫. Vandemataram Ramachandra Rao, **Police Action on Hyderabad State,** 1970.

೦೬. Halappa, G.S.(Ed), **Freedom for Progress,** Gulbaraga, 1966.

## ನಿಯತಕಾಲಿಕೆಗಳು

| | | |
|---|---|---|
| ೦೧. | ಪ್ರಜಾವಾಣಿ | ೨೮.೦೯.೧೯೯೭ |
| ೦೨. | ಪ್ರಜಾವಾಣಿ | ೨೩.೦೨.೧೯೯೭ |
| ೦೩. | ಪ್ರಜಾವಾಣಿ | ೨೮.೧೧.೧೯೯೮ |
| ೦೪. | ಕನ್ನಡ ಪ್ರಭ | ೧೭.೦೯.೧೯೯೮ |
| ೦೫. | ಸಂಯುಕ್ತ ಕರ್ನಾಟಕ | ೨೦.೦೯.೧೯೯೮ |
| ೦೬. | ಲಂಕೇಶ ಪತ್ರಿಕೆ | ೩೦.೦೯.೧೯೯೮ |
| ೦೭. | ಸಂಯುಕ್ತ ಕರ್ನಾಟಕ | ೧೭.೦೯.೧೯೯೮ |
| ೦೮. | ಸಂಯುಕ್ತ ಕರ್ನಾಟಕ | ೨೦.೦೮.೨೦೦೧ |
| ೦೯. | ತಳಮಳ ವಾರಪತ್ರಿಕೆ | ೨೨.೦೨.೨೦೦೧ |
| ೧೦. | ಸಂಯುಕ್ತ ಕರ್ನಾಟಕ | ೧೭.೦೯.೨೦೦೧ |
| ೧೧. | ಸಂಯುಕ್ತ ಕರ್ನಾಟಕ | ೧೨.೦೮.೨೦೦೧ |



ಸ್ವಾಮಿ ರಮಾನಂದ ತೀರ್ಥರು



ವಿಮೋಚನಾ ಹೋರಾಟಗಾರರು

ಶ್ರೀ ವಿ.ಪಿ.ದೇವಲಗಾಂವಕರ, ಶ್ರೀ ಮುರುಳೀಧರ ಕಮತೀಕರ, ಶ್ರೀ ಜಗನಾಥರಾವ್ ಚಂದ್ರಿಕೆ



ರಜಾಕಾರರ ನಾಯಕ ಕಾಸಿಂ ರಜ್ವಿ



೭ನೇ ನಿಜಾಂ ಮೀರ ಉಸ್ಮಾನ ಅಲಿಖಾನ ಬಹದ್ದೂರ್



ಮಲಕಾಜಪ್ಪ ಜೇವೂರು, ವಿಮೋಚನಾ ಹೋರಾಟಗಾರ



ಮಲಕಾಜಪ್ಪನವರಿಗೆ ಕೊಟ್ಟ ತಾಮ್ರ ಫಲಕ



ಕೇಸರಜವಳಗಾ ಶಿಬಿರದ ಶಿಬಿರಾಧಿಪತಿ ವಿ.ಜಿ.ಕಲ್ಯಾಣಕರ್



ವಾಗ್ದರಿಗಿ ಶಿಬಿರದ ಶಿಬಿರಾಧಿಪತಿ ಅಣ್ಣಾರಾವ್ ವೀರಭದ್ರಪ್ಪ ಪಾಟೀಲರು ಹೋರಾಟದ ಸಮಯದಲ್ಲಿ ಉಪಯೋಗಿಸಿದ ಕಬ್ಬಿಣದ ರಕ್ಷಾಕವಚ



ಧುಮನಿ ಶಿಬಿರದ ಶಿಬಿರಾಧಿಪತಿ ಗುರುಭೀಮರಾವ್ ಪಾಟೀಲ, ಮಧುಗುಣಕಿ



ರಜಾಕಾರರ ಎಂಟು ಜನರ ಸಾಮೂಹಿಕ ಹತ್ಯ ಮಾಡಿದ ಸ್ಥಳ, ಡೊಗಿಬನ, ಲಾಡ್ ಚಿಂಚೋಳಿ ಗ್ರಾಮ



ರಜಾಕಾರರ ಹತ್ತು ಜನರ ಸಾಮೂಹಿಕ ಹತ್ಯ ಮಾಡಿದ ಸ್ಥಳ, ಡೊಗಿಬನ,
ಲಾಡ್ ಚಿಂಚೋಳಿ ಗ್ರಾಮ



ವಿಮೋಚನಾ ಹೋರಾಟಗಾರರಾದ ಚಂದ್ರಶೇಖರ ಪಾಟೀಲ,ಮಹಮ್ಮದ್ ಅಲಿ, ಜಗನ್ನಾಥರಾವ್
ಚಂಡ್ರಿಕಿ ಮತ್ತು ಮಹಾದೇವಪ್ಪ ರಾಂಪುರೆ



ಸಿಂದಗಿ ಶಿಬಿರದ ಶಿಬಿರಾಧಿಪತಿ ಸರ್ದಾರ್ ಶರಣಗೌಡ ಪಾಟೀಲ ಇನಾಂದಾರ್

**SHOEBULLAH KHAN**

Editor, "IMROZE" a Urdu Nationalist daily

*Before assassination*





ಇಮ್ರೋಜ್ ಉರ್ದುಪತ್ರಿಕೆಯ ಸಂಪಾದಕ, ರಜಾಕಾರರಿಂದ ಬಲಿಯಾದ ಶಹೋಬುಲ್ಲಾಖಾನ್

